


# ಹಿಂಗಾರ

ಅರೆಬಾಸೆ ತ್ರೈಮಾಸಿಕ



ಸಂಪುಟ : 4 ಸಂಚಿಕೆ : 9 ದಿನಾಂಕ : 31-03-2022 ಬೆಲೆ : ರೂ. 20

ಜನವರಿ - ಮಾರ್ಚ್ 2022



ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




ಬಂದರು ಮತ್ತೆ ಮೀನುಗಾರಿಕೆ ಸಚಿವರಾದ ಎಸ್.ಅಂಗಾರವು ಪ್ರಶಸ್ತಿ ಪ್ರದಾನ ಜಂಬರಲಿ ಮಾತಾಡ್ದು




ಗೌರವ ಪ್ರಶಸ್ತಿ ಪ್ರದಾನ ಜಂಬರಲಿ ವೇದಿಕೆಲಿ ಅಕಾಡೆಮಿನ ಅಧ್ಯಕ್ಷರ್, ಸದಸ್ಯರ್‌ಗ ಮತ್ತೆ ರಿಜಿಸ್ಟ್ರಾರ್




ಪಡಿಕ್ಕಲ್ ಐನ್‌ಮನೆಲಿ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆ



ಪಡಿಕ್ಕಲ್ ಐನ್‌ಮನೆಲಿ ಅರೆಭಾಷೆ ಸಂಸ್ಕೃತಿ ಶಿಬಿರಕ್ಕೆ ಸ್ವಾಗತ ಕೋರುದು



ಶ್ರೀ ಸುಬ್ರಹ್ಮಣ್ಯೇಶ್ವರಿ ಪದವಿ ಪೂರ್ವ ವಿದ್ಯಾಲಯಲಿ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಂಘದ ಉದ್ಘಾಟನೆ




ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ



**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
**ಮಡಿಕೇರಿ**

# ಹಿಂಗಾರ

**ಅರೆಭಾಷೆ ತ್ರೈಮಾಸಿಕ**

ಸಂಪುಟ : 4 ಸಂಚಿಕೆ : 9

ದಿನಾಂಕ : 31–3–2022 ಕೊಡಗು ರೂ. 20

ಪ್ರಧಾನ ಸಂಪಾದಕರ್
**ಲಕ್ಷ್ಮೀನಾರಾಯಣ ಕಜೆಗದ್ದೆ**

ಸಂಪಾದಕರ್
**ಡಾ. ದಯಾನಂದ ಕೂಡಕಂಡಿ**

ಸಹಸಂಪಾದಕರ್
**ಪುರುಷೋತ್ತಮ ಕಿರ್ಲಾಯ**

| | |
|---|---|
| **HINGARA** | **ಹಿಂಗಾರ** |
| A Quarterly Magazine | ತ್ರೈಮಾಸಿಕ ಪತ್ರಿಕೆ |
| Published by | ಪ್ರಕಾಶಕರು |
| **Karnataka Arebhase Samskruthi Mathu Sahitya Academy** | **ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ** |
| Coffee Krip, 1st Floor | ಕಾಫಿ ಕೃಪಾ, ಒಂದನೇ ಮಹಡಿ, |
| Rajaseat Rd, Madikeri - 571 201 | ರಾಜಸೀಟ್ ರಸ್ತೆ, ಮಡಿಕೇರಿ–571201 |
| Ph : 08272-223055 | ದೂರವಾಣಿ : 08272–223055 |
| arebaseacademy@gmail.ocm | arebaseacademy@gmail.ocm |
| www.arebaseacademy.com | www.arebaseacademy.com |
| Chief Editor | ಪ್ರಧಾನ ಸಂಪಾದಕರ್ |
| **Lakshminarayana Kajegadhe** | **ಲಕ್ಷ್ಮೀನಾರಾಯಣ ಕಜೆಗದ್ದೆ** |
| Editor | ಸಂಪಾದಕರ್ |
| **Dr. Dayananda Kudakandi** | **ಡಾ. ದಯಾನಂದ ಕೂಡಕಂಡಿ** |
| Managing Editor | ವ್ಯವಸ್ಥಾಪಕ ಸಂಪಾದಕರ್ |
| **Chinnaswamy** | **ಚಿನ್ನಸ್ವಾಮಿ** |
| Cover Page Photo | ಮುಖಪುಟ ಚಿತ್ರ |
| **Shashi Photogenics, Sullia** | **ಶಶಿ ಪೊಟೋಜೆನಿಕ್ಸ್, ಸುಳ್ಯ** |
| Printed at | ಮುದ್ರಣ |
| **Aakrithi Prints** | **ಆಕೃತಿ ಪ್ರಿಂಟ್ಸ್** |
| Mangaluru | ಮಂಗಳೂರು |
| Ph. 0824-2972002 | ದೂರವಾಣಿ : 0824–2972002 |
| Pages : 80 | ಪುಟಗಳು : 80 |
| Copies : 2000 | ಪ್ರತಿಗಳು : 2000 |
| Vol : 5 - 1 | ಸಂಪುಟ 4 ಸಂಚಿಕೆ 9 |
| Period : January to March 2022 | ಜನವರಿ – ಮಾರ್ಚ್ 2022 |
| Price : Rs. 20 | ಬೆಲೆ : ರೂ. 20/– |
| 3 year subscription : | ತ್ರೈವಾರ್ಷಿಕ ಚಂದಾ : |
| Rs. 200 | ರೂ. 200 |



# ಅಧ್ಯಕ್ಷರ ಮಾತ್

ಎಲ್ಲವುಕೆ ನಮಸ್ಕಾರ

ಈ ಸಂಚಿಕೆ ನಿಮ್ಮ ಕೈಗೆ ಸಿಕ್ಕಿಕನ ನೀವೆಲ್ಲಾ ಅಡಿಕೆ, ಮೆಣ್ಸ್, ಕಾಫಿ ಕೊಯ್ಲಿನ ಕೆಲ್ಸ ಮುಗ್ಸಿ ಮಳೆಗಾಲಕ್ಕೆ ಅಟ್ಟಣೆ ಮಾಡ್ತಾ ಇರುವೆರಿ. ಕೃಷಿ ಕೆಲ್ಸ ಅಲ್ಲದೆನೆ ಬೇರೆ ಚಾಕ್ರಿ ಮಾಡುವೊವು ಕೂಡ ಅಷ್ಟೆ, ಒಂದು ಘಳಿಗೆ ಪುರುಸೊತ್ತು ಇಲ್ಲೆ ಅಂತಾ ಪರೆಂಚಿಕೊಂಡು ಓಡಾಡ್ತ ಇದ್ದವೆ. ಇಷ್ಟೆಲ್ಲಾ ಕೆಲ್ಸ ಇದ್ರೂ ನೀವೆಲ್ಲಾ ಹಿಂಗಾರ ಓದಿ ಅದರಲ್ಲಿ ಇರುವ ಸರಿ ತಪ್ಪುಗಳ ಹೇಳಿ ನಮ್ಮ ಎಚ್ಚರಿಸ್ತಾ ಇರ್ದು ಒಳ್ಳೆ ಸಂಗತಿ. ಈಗ ತುಂಬಾ ಜೆನ ಹೊಸಬರ್ ಬರೆತಾ ಒಳೊ. ಇದ್ ಕುಸಿನ ಸಂಗತಿ. ನಾವ್ ಬರ್ದದ್ ಹಿಂಗಾರಲಿ ಬಾತ್ಲೆ ಅಂತಾ ಫೋನ್ ಮಾಡಿ ಬೇಜಾರ್ ಮಾಡಿಕೊಂಬವೂ ಕೂಡ ಒಳೊ.

ಜನವರಿ ತಿಂಗ ನಮ್ಮ ಅಕಾಡೆಮಿನ ಸುರುನ ಅಧ್ಯಕ್ಷರ್ ಹಂಗೆ ಸಾಹಿತಿ ಸಂಘಟಕರಾಗಿ ಕೆಲ್ಸ ಮಾಡ್ದ ಸಂಪಾಜೆ ನಂಜಯ್ಯನ ಮನೆ ದೇವಿಪ್ರಸಾದರ್ ತೀರಿಕಂಡ. ತೀರಿಹೋಕೆ ಮೊದ್ಲ್ ಅವ್ಕೆ ಅಕಾಡೆಮಿ ಗೌರವ ಪ್ರಶಸ್ತಿ ಕೊಟ್ಟು ಗೌರವಿಸಿದ್ದಕ್ಕೆ ಮತ್ತು ಅವರ ಬಗ್ಗೆ ಸಾಕ್ಷ್ಯಚಿತ್ರ ಮಾಡಿಕೆ ಸಾಧ್ಯ ಆತ್ ತೇಳುದ್ ನಾವುಗೆ ಸಮಧಾನದ ಸಂಗತಿ. ಅವರ ನೆಂಪುಲಿ, ಅಂತರ್ಜಾಲಲಿ ಶ್ರದ್ಧಾಂಜಲಿ ಸಭೆ ನಡ್ಸಿ ಗೌರವ ಸೂಚಿಸಿದೊ. ಸಭೆಲಿ ಗಿರೀಶ್ ಕಾಸರವಳ್ಳಿ, ಪುರುಷೋತ್ತಮ ಬಿಳಿಮಲೆ, ಇಕ್ಬಾಲ್ ಅಹಮ್ಮದ್ ಎಂ. ಬಿ.ಸದಾಶಿವ, ಸುಬ್ರಾಯ ಸಂಪಾಜೆ ಭಾಗವಹಿಸಿ ಅವರ ಬಗ್ಗೆ ಕೊಂಡಾಡ್ದೊ. ಹೊಸ ತಲೆಮಾರ್ನವ್ಕೆ ಅರೆಭಾಷೆ ಜನಾಂಗ ಎಂತ ದೊಡ್ಡ ಸೊತ್ತುನ ಕಳಕಂಡದ್ ಅಂತಾ ಗೊತ್ತಾದ್ ಆಗಲೆ.

2019 ಮತ್ತೆ 2020ರ ಸಾಲಿನ ಗೌರವ ಪ್ರಶಸ್ತಿ ಕೊಡುವ ಕಾರ್ಯಕ್ರಮ ಕೊರೋನಂದಾಗಿ ಮಾಡಿಕೆ ಸಾಧ್ಯ ಆಗಿತ್ಲೆ. ಎರ್ಡ್ ವರ್ಸದ ಗೌರವ ಪುರಸ್ಕಾರ ಸುಳ್ಯದ ಕುರುಂಜಿ ಜಾನಕಿ ವೆಂಕಟರಮಣ ಸಭಾಭವನಲಿ ಜನವರಿ 3ರಂದ್ ಕರ್ನಾಟಕ ಘನ ಸರಕಾರದ ಕನ್ನಡ ಮತ್ತು ಸಂಸ್ಕಂತಿ ಇಲಾಖೆ ಸಚಿವರಾದ ಮಾನ್ಯ ಶ್ರೀ ಸುನಿಲ್ ಕುಮಾರ್, ಸುಳ್ಯ ಕ್ಷೇತ್ರ ಶಾಸಕರ್, ಮಂತ್ರಿಗ ಶ್ರೀ ಎಸ್. ಅಂಗಾರ, ಲೋಕಸಭಾ ಸದಸ್ಯರ್ ನಳಿನ್ ಕುಮಾರ್ ಕಟೀಲ್ ಇವರ ಹಾಜರಿಲಿ ಬಾರಿ ಪೊರ್ಲುಲಿ ನಡ್ತ್.

ಅಕಾಡೆಮಿನ ಮುಖ್ಯ ಉದ್ದೇಸಗಳ್ಲಿ ಪುಸ್ತಕ ಪ್ರಕಟಣೆ ಕೂಡ ಒಂದು. ಪುಸ್ತಕನ ಬೇರೆ ಯಾವುದಾದರ್ ಕಾರ್ಯಕ್ರಮಲಿ ಬಿಡುಗಡೆ ಮಾಡ್ರೆ ಲೇಖಕರಿಗೆ ಗೌರವ ಕೊಟ್ಟಂಗೆ ಆದುಲೆ ಅಂತಾ ಹೇಳಿ ಪುಸ್ತಕ ಬಿಡುಗಡೆ ಮಾಡಿಕೆ ಅಂತಲೇ ಹೇಳಿ ಕೊಡಗ್ನ ಚೆಟ್ಟಳ್ಳಿಲಿ ಒಂದು ವಿಸೇಸ ಕಾರ್ಯಕ್ರಮ ಇಸಿಕಂಡೊ. ಕಾರ್ಯಕ್ರಮಲಿ

ಮಂಗಳೂರು ವಿಶ್ವವಿದ್ಯಾನಿಲಯದ ಪರೀಕ್ಷಾಂಗ ಕುಲ ಸಚಿವರಾದ ಪಿ.ಯಲ್ ಧರ್ಮ ಮತ್ತೆ ವಿಶ್ರಾಂತ ಪ್ರಾಂಶುಪಾಲರಾದ ಡಾ. ಪ್ರಭಾಕರ ಶಿಶಿಲ ಭಾಗವಹಿಸಿ ಪುಸ್ತಕ ಬಿಡುಗಡೆ ಮಾಡಿ ಬಾರಿ ಪೊರ್ಲುಲಿ ಮಾತಾಡ್ದೊ. ಸಭೆಲಿ 7 ಪುಸ್ತಕ ಬಿಡುಗಡೆ ಆತ್. ಅದರ್ಲಿ ನಾಲ್ಕ್ ಜನರ್ದ್ ಸುರುನ ಅರೆಭಾಸೆ ಪುಸ್ತಕ ಅಂತಾ ಹೇಳ್ದು ದೊಡ್ಡ ವಿಸಯ. ಚೆಟ್ಟಳ್ಳಿನಂತಾ ಹಳ್ಳಿ ಪ್ರದೇಸಲಿ ಪುಸ್ತಕ ಬಿಡುಗಡೆ ಕಾರ್ಯಕ್ರಮಕ್ಕೆ ನೂರಾರು ಜನ ಸೇರ್ದ್ ಹಂಗೆನೇ ತುಂಬಾ ಜೆನಗ ಪುಸ್ತಕನ ದುಡ್ಡು ಕೊಟ್ಟ್ ತಕಂಡದ್ ಪುಸ್ತಕ ಬರಿಯವುಕೆ ಉಮೇದ್ ಕೊಟ್ಟ ಹಂಗೆ ಆತ್.

ಹಂಗೇನೆ ಹಿಂದೆ ನಡ್ಸಿಕೊಂಡ್ ಬಂದ ಸಂಸ್ಕೃತಿ ಶಿಬಿರ ಗೋಣಿ ಕೊಪ್ಪದಂತ ಸಮುದಾಯ ಸಂಘಟನೆ ಸಂಸ್ಥೆ ಇಲ್ಲದ ಊರ್ಲಿ ನೂರಾರ್ ಜನ ಸೇರ್ಸಿ ಮಾಡಿಕೆ ಸಾಧ್ಯ ಆತ್. ಕಡಬ ತಾಲೂಕಿನ ಸುಬ್ರಹ್ಮಣ್ಯದ ಪಿ.ಯು. ಕಾಲೇಜ್ಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘ ಹುಟ್ಟು ಹಾಕಳೊ. ಇದೆಲ್ಲ ಮುಂದಿನ ದಿನಗಳ್ಲಿ ಅರೆಭಾಸೆಗೆ ತುಂಬಾ ಉಪಕಾರ ಆದೆ ಅಂತಾ ನಂಗೆ ಅನ್ಸಿದೆ.

ಊರ್ ಊರ್ಲಿ ಅರೆಭಾಷೆಗೆ ಸಂಬಂಧಪಟ್ಟ ಕೆಲಸ್ ಮಾಡಿಕೆ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂವರ್ಧನಾ ಸಮಿತಿ ಅಂತಾ ಮಾಡಿ ಸುಳ್ಯ ಮತ್ತು ಕಡಬ ತಾಲೂಕ್ನ ಮೂವತ್ತ್ ಊರ್ಗಳ ಗ್ರಾಮ ಸಮಿತಿ ಮಾಡಿ ಅವರೆಲ್ಲರ್ನ ಸುಳ್ಯ ತಾಲೂಕಿನ ಕೆ.ಯಸ್. ಗೌಡ ಕಾಲೇಜಿನ ಸಭಾಂಗಣಲಿ ಸಭೆ ಸೇರ್ಸಿ ಮುಂದಿನ ಕಾರ್ಯಕ್ರಮಗಳ ಬಗ್ಗೆ ಚರ್ಚೆ ಮಾಡ್ದೊ.

ಇದೆಲ್ಲ ಕೆಲ್ಸದ ನಡುಲಿ ಬಾರಿ ಕುಸಿನ ಸಂಗತಿ ಎಂತಾತ ಹೇಳ್ರೆ ನಮ್ಮ ಕರ್ನಾಟಕ ಘನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎಸ್. ಬಸವರಾಜ್ ಬೊಮ್ಮಾಯಿ 2022ರ ಬಜೆಟ್ಲಿ ಮಂಗಳೂರು ವಿಶ್ವವಿದ್ಯಾನಿಲಯಲಿ ಅರೆಭಾಷೆ ಸಂಶೋಧನ ಕೇಂದ್ರ ಸ್ಥಾಪನೆ ಮಾಡುವೆ ಅಂತಾ ಹೇಳಿ ಘೋಷಣೆ ಮಾಡ್ದ್. 2021ರ ಬಜೆಟ್ನ ಸಂದರ್ಭಲಿ ಡಿ.ವಿ. ಸದಾನಂದ ಗೌಡರ ಮುತುವರ್ಜಿಲಿ ಅಂದಿನ ಮುಖ್ಯಮಂತ್ರಿ ಯಡಿಯೂರಪ್ಪ ಅವರ ಭೇಟಿ ಮಾಡಿ, ಈ ಬಗ್ಗೆ ಪ್ರಸ್ತಾಪ ಮಾಡಿದ್ದ್, ಅದ್ಕೆ ಯಡಿಯೂರಪ್ಪ ಅವು ಒಪ್ಪಿಯೂ ಇದ್ದೊ. ಕೊರೋನ ಕಾರಣಂದ ಅದ್ ಆಗ ಸಾಧ್ಯ ಆತ್ಲೆ. ಈ ಸರ್ತಿ ಮತ್ತೆ ನಾವು ಅಕಾಡೆಮಿ ಕಡೆಂದ ಡಿ.ವಿ. ಸದಾನಂದ ಗೌಡರ ಭೇಟಿ ಮಾಡಿ ಮನವಿ ಮಾಡಿಕಂಡಿದ್ದೊ. ನಮ್ಮ ಮನವಿಗೆ ಗಮನಕೊಟ್ಟ ಅವು ಮತ್ತೆ ಮುಖ್ಯಮಂತ್ರಿಗಳ ಭೇಟಿ ಮಾಡಿ ಸಂಶೋಧನಾ ಕೇಂದ್ರ ಆಗಿಯೇ ಆಕು ಅಂತ ಹಟ ಮಾಡ್ದ ಕಾರಣಂದ ಈ ಕೆಲಸ ಸಾಧ್ಯ ಆತ್. ಭಾಸೆಯ ಬಗ್ಗೆ ಅಭಿಮಾನ ಇರುವೊವು ಎಲ್ಲವು ಈ ಕೆಲಸ ಮೆಚ್ಚಿ ಅಭಿನಂದನೆ ಸಲ್ಲಿಸಿಯೊಳೊ. ಅಕಾಡೆಮಿ ಈ ಕೆಲ್ಸದ ಹಿಂದೆ ಎರ್ಡ್ ವರ್ಷಂದ ಪಟ್ಟ ಸ್ರಮಕ್ಕೆ ಈಗ ಪ್ರತಿಫಲ ಸಿಕ್ಕಿಟ್ಟು. ಇದ್ಕೆ ಕಾರಣ ಡಿ.ವಿ. ಸದಾನಂದ ಗೌಡ್ರು ಮತ್ತೆ ಎಲ್ಲಾ ಜನಪ್ರತಿನಿಧಿಗಳಿಗೆ ಅಕಾಡೆಮಿ ಅಭಿನಂದನೆ ಸಲ್ಲಿಸ್ತ ಉಟ್ಟು.

**ಲಕ್ಷ್ಮೀನಾರಾಯಣ ಕಜೆಗದ್ದೆ**



# ಸಂಪಾದಕೀಯ

ಅರೆಬಾಸೆನ ಹಿಂಗಾರ ತ್ರೈಮಾಸಿಕ ಪುಸ್ತಕನ ಓದ್‌ವ ಪ್ರೀತಿಯ ಎಲ್ಲ ಅರೆಬಾಸೆ ಓದ್‌ಗರಿಗೆ ನಮಸ್ಕಾರಗ ಮತ್ತೆ ಹೊಸ ವರ್ಷದ ಶುಭಾಶಯಗ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಂದ ಹೊರತರ್‌ತ್ತಿರ್‌ವ ಹಿಂಗಾರ ತ್ರೈಮಾಸಿಕನ ಚಂದಾದಾರ್‌ರಾಗಿ, ನಿರಂತರಾಗಿ ಓದಿಕಂಡ್, ಮೌಲ್ಯದ ಬರಹಗಳ್ನ ಮತ್ತೆ ಒಳ್ಳ ಸಲಹೆಗಳ್ನ ಕೊಟ್ಟ್ ಸಹಕರಿಸ್ತಿರ್‌ವ ನಿಮಿಗೆ ಹೃದಯ ತುಂಬಿದ ಧನ್ಯವಾದಗ.

ಈ ಹಿಂಗಾರ ತ್ರೈಮಾಸಿಕ ಪುಸ್ತಕ ನಾಲ್ಕನೆ ಸುಂಪುಟದ ಒಂಬತ್ತನೆ ಸಂಚಿಕೆ. ಈ ಸಂಚಿಕೆಲಿ 2022ರ ಜನವರಿಂದ ಮಾರ್ಚ್ ತಿಂಗಳ ಕೊನೆವರೆಗೆ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ನಡ್‌ಸಿದ ಕಾರ್ಯಕ್ರಮಗಳನ್ನ ಸಂಕಲಿಸ್ಯೊಳೊ.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಮೊದಲ ಅಧ್ಯಕ್ಷರಾಗಿದ್ದ ಎನ್.ಎಸ್.ದೇವಿಪ್ರಸಾದ್ ಸಂಪಾಜೆವು ಜನವರಿ ತಿಂಗಳ್‌ಲಿ ವಿಧಿವಶರಾದೊ. ಇವು ಕಲೆ, ಸಾಹಿತ್ಯ, ನಾಟಕ, ಸಿನೇಮಾ, ನಟ–ನಿರ್ದೇಶಕ, ನಿರ್ಮಾಪಕರಾಗಿ ಹೆಸ್ರ್ ಮಾಡ್ಯೊಳೊ. ಅಲ್ಲದೆ ಸಹಕಾರ, ಶೈಕ್ಷಣಿಕ, ರಾಜಕೀಯ, ಧಾರ್ಮಿಕ ಮತ್ತೆ ಜನಪರ ಕಳಜಿಲಿ ಸಹ ಹೆಸ್ರ್ ಪಡ್ಕೊಂಡೊಳೊ. ಹೀಂಗೆ ಸಾಮಾಜಿಕ ಬೊದ್‌ಕ್ ಮತ್ತೆ ಸಂಘಟನಾತ್ಮಕ ಕ್ಷೇತ್ರಲಿ ಅರೆಭಾಷೆ ಪ್ರದೇಶಲಿ ಕೆಲ್‌ಸ ಮಾಡ್ಯೊಳೊ. ಇವು ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯದ ರಾಯಭಾರಿನಂಗಿದ್ದೊ. ಇವರ ಆತ್ಮಕ್ಕೆ ದೇವರು ಚಿರಶಾಂತಿನ ನೀಡಲಿ ಅಂತ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ವತಿಂದ ಕೇಲಿಕೊಂಬನೊ.

ಈ ಸಂಚಿಕೆಲಿ ಪುರುಷೋತ್ತಮ ಕಿರ್ಲಾಯವು ದಿ. ಎನ್.ಎಸ್. ದೇವೀಪ್ರಸಾದ್‌ರ ಸಣ್ಣ ಪರಿಚಯ ಮಾಡ್ಯೊಳು. ವ್ಯಕ್ತಿ ಪರಿಚಯ ವಿಭಾಗಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಗೌರವ ಪ್ರಶಸ್ತಿ ಪಡ್ಕಂಡ ದಿವಂಗತ ಕುಲ್ಲಚನ ಕಾರ್ಯಪ್ಪ ಅವ್ರ ಪರಿಚಯನ ಬಾರಿಯಂಡ ಜೋಯಪ್ಪವು ಮಾಡ್ಯೊಳೊ. ಸಂಸ್ಕೃತಿ ದರ್ಪಣಲಿ ಶ್ರೀಮತಿ ಕಡ್ಯದ ಪಾರ್ವತಿ ಕೃಷ್ಣಪ್ಪವು ಬರ್ದ

‘ಕಣ್ಮರೆ ಆಗ್‌ತಿರ್‌ವ ನಮ್ಮ ಹಳೆ ಉಡಿಗೆ ಪದ್ದತಿ’ ಮತ್ತೆ ಉಷಾ ಪ್ರಭಾಕರ್‌ವು ಬರ್ದ ‘ನೆರ್‌ದ ಮೊದುವೆ (ಋತು ಶಾಂತಿ)’ ತೇಳುವ ಬರವಣೆಗೆನ ಪ್ರಕಟಿಸ್ಯೊಳೊ. ಅನುಭವ ವಿಭಾಗಲಿ ಸಂಗೀತಾ ರವಿರಾಜ್ ಅವ್ರ ‘ಕೈ ಮತ್ತ್ ಬುದ್ಧಿನ ಕಸರತ್ತ್‌ಕೇರಂ ಆಟ’ ಮತ್ತೆ ಕಟ್ರತನ ಲಲಿತಾ ಅಯ್ಯಣ್ಣವರ ‘ಮೆಲುಕು’ತೇಳುವ ಅನುಭವನ ಹಂಚಿಕೊಂಡೊಳೊ. ವೈಚಾರಿಕ ವಿಭಾಗಲಿ ಶಶಿಧರ್ ಬಿ.ಆರ್. ಅವ್ರ ‘ಸ್ಕರಿಯ ಪುರಾಣ’ ಮತ್ತೆ ಕವಿತಾ ಕಿರಣ್ ಜೈನೀರಾ ಅವ್ರ ‘ಇರೋ ಜೀವನಲಿ ಖುಷಿ ಕಾಂಬೋನೋ’ತೇಳ್‌ವ ವೈಚಾರಿಕ ಬರವಣಿಗೆನ  ಪ್ರಕಟಿಸ್ಯೊಳೊ.

ಕಥಾಜೊಂಪೆ ವಿಭಾಗಲಿ ಲೀಲಾ ದಾಮೋದರ ಅವ್ರ ‘ಚಕ್ರ ಬಡ್ಡಿ’, ಶರಣ್ಯ ಕೋಲ್ಚಾರ್ ಮತ್ತೆ ಪಟ್ಟಡ ದೀಕ್ಷಿತ್ ಅವು ಬರ್ದ ‘ಮೌನ ವ್ರತ’  ಮತ್ತೆ ಲೀಲಾಕುಮಾರಿ ತೊಡಿಕಾನ ಅವ್ರ ‘ತಲೆ ಬಿಸಿ ಎಲ್ಲವೂಕು ಉಟ್ಟು ಮಾರಾಯ್ರೆ’ ಹಾಂಗೆ ಹಾಸ್ಯಕಥಾ ವಿಭಾಗಲಿ ಸೂದನ ಈರಪ್ಪ ಅವ್ರ ‘ಮೀನ್ ಬ್ಯಾಟೆ’  ತೇಳುವ ಕಥೆ’ನ ಪ್ರಕಟಿಸ್ಯೊಳೊ.

ಕವನ ವಿಭಾಗಲಿ ಪಟ್ಟಡ ಪ್ರಭಾಕರವು ಬರ್ದ ‘ಕೋಳಿದ್ ಆಯಸ್ ಎಸ್ಟ್‌ಗಡ’, ಭವಾನಿಶಂಕರ ಹೊದ್ದೆಟಿವು ಬರ್ದ ‘ಪದ್ಮಂಗೆ ಸೀರೆ ಮೇಲೆ ಆಸೆ’, ಸೀತಾರಾಮ ಕೇವಳವು ಬರ್ದ ‘ನಮ್ಮ ಅರೆಬಾಸೆ’, ಪ್ರೀತಮ್ ಅಡ್ಕಾರ್ ಅವ್ರ ‘ಅರಳಿದ ಮನ್ಸ್’, ಶ್ರೀಮತಿ ಶಿವದೇವಿ ಅವನೀಶ್‌ಚಂದ್ರ ಅವ್ರ ‘ನಾಡ ಹಬ್ಬದಸಾರ’ ಮತ್ತೆ ಕುಯಿಂತೋಡು ದಾಮೋದರ ಅವ್ರ ‘ಸೂರುಗೆ ನೆನ್ದನೆ’ ತೇಳುವ ಕವನನ ಪ್ರಕಟಿಸ್ಯೊಳೊ. ಬನ್ನಿ ಓದೋಮ ತೇಳುವ ಅಂಕಣಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವ್ರ ‘ಶ್ರೀಕೃಷ್ಣನ ಅಂತಿಮ ಸಂದರ್ಶನ’ ತೇಳುವ ಸಣ್ಣಕತೆನ ತುಣುಕ್‌ನ ಪ್ರಕಟಿಸ್ಯೊಳೊ. ಎಂ.ಜಿ.ಕಜೆ ಅವು ಮೀನ್ ಹಿಡೆವ ‘ಕೂಳಿ’ನ ಮಾಹಿತಿನ ಈ ಸಂಚಿಕೆಲಿ  ಕೊಟ್ಟೊಳೊ.

ಸಂಚಿಕೆನ ಹೊರತಾಕೆ ಅಕಾಡೆಮಿನ ಅಧ್ಯಕ್ಷರ್, ಸಹ ಸಂಪಾದಕರ್, ಸರ್ವ ಸದಸ್ಯರ್ ಮತ್ತೆ ರಿಜಿಸ್ಟ್ರಾರ್ ಸಹಕರಿಸ್ಯೊಳೊ. ಬರಹಗಾರರ್ ತಮ್ಮ ಅಮೂಲ್ಯವಾದ ಬರವಣೆಗೆಗಳನ್ನ ನೀಡಿ ಸಂಚಿಕೆನ ಮೆರ್‌ಗ್‌ನ ಜಾಸ್ತಿ ಮಾಡ್ಯೊಳೊ. ಪ್ರತಿ ತಿದ್ದುವಲ್ಲಿ ಸಂಪಾದಕ ಮಂಡಳಿನ ಸಹಸಂಪಾದಕರಾದ ಪುರೊಷೋತ್ತಮ ಕಿರ್ಲಾಯವು  ಹಾಂಗೇ ಎಲ್ಲ ಸದಸ್ಯರ್‌ಗ ಕೈ ಜೋಡಿಸ್ಯೊಳೊ. ಶಶಿ ಪೊಟೋಜೆನಿಕ್ಸ್, ಸುಳ್ಯ ಅವು ಮುಖಪುಟದ ಪೋಟೋನ ಕೊಟ್ಟೊಳೊ. ಆಕೃತಿ ಪ್ರಿಂಟ್ಸ್, ಮಂಗಳೂರು ಇವು ಲಾಯ್ಕಲಿ ಮುದ್ರಿಸಿ ಸಹಕರಿಸ್ಯೊಳೊ. ಸಂಚಿಕೆನ ಪ್ರಕಟಿಸಿಕೆ ಸಹಕರ್‌ಸಿದ ಎಲ್ಲವ್ಕೆ ಹೃದಯ ತುಂಬಿದ ಧನ್ಯವಾದಗಳ್‌ನ ಅರ್ಪಿಸಿನೆ.

ದಿನಾಂಕ: 31.3.2022

**ಡಾ. ದಯಾನಂದ ಕೂಡಕಂಡಿ**
ಸಂಪಾದಕರ್

ಪ್ರಕಟ ಆದ ಬರವಣೆಗೆಗೆ ಆಯಾ ಬರಹಗಾರರೆ ಜವಾಬ್ದಾರರ್

# ಹಿಂಗಾರ ಒಡ್ಸ್‌ಕನ

**ಕಥಾ ಜೊಂಪೆ**



**ಹಾಸ್ಯ ಕಥೆ**



**ಬನ್ನಿ ಓದೋಮ**



**ಕವನ**



**ಕಣ್ಮರೆ ಆಗ್‌ತಿರ್‌ವ ಪರಿಕರದ ಪರಿಚಯ**



# ಎನ್.ಎಸ್. ದೇವಿಪ್ರಸಾದ್‌ರ ಸಣ್ಣ ಪರಿಚಯ

ಅಬ್ಬಾ! ಅದೆಂತಾ ರೂಪ, ಅದೆಂತಾ ಪೊರ್ಲು, ಬೆಳ್ಳನೆ ಬೆಳ್ಳನೆ ಮೈಬಣ್ಣ, ಕಪ್ಪು ಕಪ್ಪಾದ ತೀಡಿದ ಹುಬ್ಬು, ತಲೆಕೂದಲ್. ಆಕರ್ಷಕ ಕಣ್ಣ್‌ಗ. ಒಮ್ಮೆ ನೋಡ್ರೆ ಮತ್ತೊಮ್ಮೆ ನೋಡೋಮಾಂತೇಳುವ ಒಬ್ಬ ಹೊಂತಕಾರಿ ಆಳ್, ಎಂತವರ್ನೂ ಆಕರ್ಷಿಸುವ ವ್ಯಕ್ತಿತ್ವ. ದೇವಿಕೃಪೆಂದ ಹುಟ್ಟಿದ ಇವೇ 'ದೇವಿಪ್ರಸಾದ್'. ಹುಟ್ಟಿದ್ 1942 ಏಪ್ರಿಲ್ 27, ಅಪ್ಪ ಸಣ್ಣಯ್ಯ ಪಟೇಲ್, ಅಯ್ಯೆ ಪೂವಮ್ಮ. ಸಂಪಾಜೆನ ಪ್ರತಿಷ್ಠಿತ ನಂಜಯ್ಯನ ಮನೆತನ. ಎನ್.ಎಸ್. ದೇವಿಪ್ರಸಾದರ ಬಗ್ಗೆ ಬರಿಯಕೆ ಹೊರ್ಟರೆ ತುಂಬಾತುಂಬಾ ಉಟ್ಟು. ಇದ್ ಮಾತ್ರ ಒಂದು ಅತೀ ಸಣ್ಣ ಪರಿಚಯ ಅಷ್ಟೆ. ಸಾಗರಂದ ಒಂದು ಹನಿ ನೀರ್ ತೆಗ್ದ ಹಾಂಗೆ.

ಓದಿದ್ ಬಿ.ಎ. ಮೈಸೂರು ವಿ.ವಿ.ಯಿಂದ. ಬೊಂಬಾಯಿ ವಿ.ವಿ.ಲಿ ಪತ್ರಿಕೋದ್ಯಮದ ಡಿಪ್ಲೊಮಾ. ಬಹುಮುಖಿ ಪ್ರತಿಭಾವಂತ. ರಾಜಕೀಯ, ಧಾರ್ಮಿಕ, ಶೈಕ್ಷಣಿಕ, ಕಲೆ, ಸಾಹಿತ್ಯ, ಸಿನೆಮಾ, ನಾಟಕ, ಯಕ್ಷಗಾನ ಕ್ಷೇತ್ರಗ ಮಾತ್ರ ಅಲ್ಲದೇ ಜನಪರ ಹೋರಾಟಲಿಯೂ ಮುಂದೆ ನಿತ್ತ್ ಮುನ್ನಡ್ಸಿದೊವು. ಸಂಪಾಜೆ ಪ್ರೌಢಶಾಲೆನ ಸ್ಥಾಪಕ ಮಂಡಳಿ ಸದಸ್ಯರಾಗಿ, ಸಂಪಾಜೆ ದೇವಸ್ಥಾನದ ಆಡಳಿತ ಮಂಡಳಿ ಮೊಕ್ತೇಸರರಾಗಿ, ಕೊಡಗು – ದಕ್ಷಿಣ ಕನ್ನಡ ಜಿಲ್ಲಾ ಗೌಡ ಅಭಿವೃದ್ಧಿ ಸಂಘದ ಸಂಸ್ಥಾಪಕರಾಗಿ ಅನುಪಮ ಸೇವೆ ಸಲ್ಲಿಸಿದೊವು.

ಇವು ತಯಾರ್ ಮಾಡ್ದ 'ಮೂರು ದಾರಿಗಳು' ಸಿನಿಮಾಕ್ಕೆ ರಾಷ್ಟ್ರಪ್ರಶಸ್ತಿನೊಟ್ಟಿಗೆ 5 ರಾಜ್ಯಪ್ರಶಸ್ತಿ ಬಂದುಟು. 'ಅಪಹರಣ'ತೇಳುವ ಟೆಲಿಚಿತ್ರ ನಿರ್ಮಾಣ ಮಾಡ್ದೊವು. 'ಗುಡ್ಡೆದ ಭೂತ'ತೇಳುವ ಟಿ.ವಿ. ದಾರವಾಹಿಲಿ ಅಭಿನಯಿಸಿದೊವು.

‘ಶಿರಾಡಿಭೂತ’ ನಾಟಕ ಬರ್ದ್ ನಿರ್ದೇಶನ ಮಾಡಿ, ಹಲವು ಕಡೆಗಳ್ಲಿ ಭರ್ಜರಿ ಪ್ರದರ್ಶನ ಕಂಡ್ ಭಾರಿ ಲಾಯಿಕ್ನ ಒಳ್ಳೆ ರಂಗಕರ್ಮಿತ ಹೆಸ್ರ್ ತಕಂಡವು. ಇವು ಒಬ್ಬ ಸಾಹಿತಿ ಆಗಿ ‘ಕೊಡಗಿನಲ್ಲಿ ಜಾತೀಯತೆ’ ಮತ್ತೆ ‘ಕೊಡಗಿನಲ್ಲಿ ಭಾಷಾ ಸಾಮರಸ್ಯ’ತೇಳುವ ಎರ್ಡ್ ಕೃತಿಗಳ ಹೊರತಂದೊವು. ಅರೆಭಾಷೆಲಿ ಇವು ಬರ್ದ ‘ಹೇಂಗಿತ್? ಹೇಂಗಾತ್?’ ನಾಟಕಲಿ ಅವರ ಮನ್ಸ್‌ಲಿದ್ದ ತಲ್ಲಣ ಏನ್‌ಂತ ಗೊತ್ತಾದೆ. ಒಬ್ಬ ಸಂಶೋಧಕರಾಗಿ ‘ಅಮರ ಸುಳ್ಯದ ಸ್ವಾತಂತ್ರ್ಯ ಸಮರ’ತೇಳುವ ಸಂಶೋಧನಾತ್ಮಕ ಕೃತಿನ ಬರ್ದೊವು.

1837ರ್ಲಿ ಸುಳ್ಯದ ಜನಂಗ ಬ್ರಿಟೀಷರ ವಿರುದ್ಧ ನಡ್ಸಿದ ಭಾರೀ ದೊಡ್ಡ ಹೋರಾಟದ ಬಗ್ಗೆ ಪರಿಸರದ ಈಗನ ಜನಂಗಳಿಗೆ ಗೊತ್ತಾಕೆ 1998ರ್ಲಿ ‘ಅಮರಕ್ರಾಂತಿ ಉತ್ಸವ’ದೊಟ್ಟಿಗೆ, ಸುಳ್ಯಂದ ಮಂಗ್ಳೂರುಗೆ ಕಾಲ್ನಡಿಗೆ ಜಾಥಾನ ನಡ್ಸಿ ಯಶಸ್ವಿಗೊಳ್ಸಿದೊವು. ಇದ್ ಸುಳ್ಯದ ಜನಂಗ ಹೆಂಗೆ ಬ್ರಿಟೀಷರ ವಿರುದ್ಧ ಹೋರಾಟ ಮಾಡ್ದೊತೇಳುದರ ಬಗ್ಗೆ ಈಗನ ಜನಗಳಿಗೆ ಗೊತ್ತಾಗುವಂಗೆ ಮಾಡ್ದ (ಧೀಮಂತ) ದೊಡ್ಡಜನ ಇವು. 1998ರ್ಲಿ ‘ಕೊಡಗು ಪ್ರಜಾವೇದಿಕೆ’ ಸ್ಥಾಪನೆ ಮಾಡಿ ಕನ್ನಡಪರ ಸಂಘಟನೆಗಳ ಬೆಂಬಲ ತಕಂಡ್ ಕೊಡ್ಗ್‌ನ ಕರ್ನಾಟಕಂದ ಬೇರೆ ಆಕೆ ಬೊತ್ತ್‌ತೇಳುವ ಹೋರಾಟದ ಫಲಂದಾಗಿಯೇ ಕೊಡ್ಗ್ ಜಿಲ್ಲೆ ಕರ್ನಾಟಕಲೇ ಉಳಿಯುವ ಹಾಂಗೆ ಮಾಡ್ದ ಗಟ್ಟಿಂಜ. ಆ ಸಂದರ್ಭಲಿ ಇವ್ಕೆ ಸಾಕಷ್ಟ್ ಬೆದರಿಕೆಗ ಇದ್ದರೂ ಹೆದ್ರದೆ ಮುಂದೆ ನಿತ್ತ್ ಹೋರಾಟ ನಡ್ಸಿದ ಗಂಡ್ ಮಂಜ.

ಎನ್.ಎಸ್. ದೇವಿಪ್ರಸಾದ್ ಒಬ್ಬ ಸಹಕಾರಿ ಧುರೀಣ. ಇವು ಮಡಿಕೇರಿ ಭೂ ಅಭಿವೃದ್ಧಿ ಬ್ಯಾಂಕ್‌ನ ಅಧ್ಯಕ್ಷರಾಗಿ ಹಾಂಗೂ ಕರ್ನಾಟಕ ರಾಜ್ಯ ಸಹಕಾರಿ ಭೂ ಬ್ಯಾಂಕ್‌ನ ಅಧ್ಯಕ್ಷರಾಗಿನೂ ಸೇವೆ ಮಾಡ್ದೊವು. ಅಂತರ್ ರಾಷ್ಟ್ರೀಯ ಸಂಸ್ಥೆ ಆದ ಲಯನ್ಸ್ ಕ್ಲಬ್‌ನ ಜಿಲ್ಲಾ ಪ್ರಾಂತೀಯ ಅಧ್ಯಕ್ಷರಾಗಿರಿಕನ ಅಮೇರಿಕಾ, ಜಪಾನ್ ದೇಶಗಳ ಸಮ್ಮೇಳನಗಳ್ಲಿ ಪ್ರತಿನಿಧಿಯಾಗಿ ಭಾಗವಹಿಸಿ ಕೀರ್ತಿ ತಂದೊವು.

ಕಲೆ, ಇತಿಹಾಸ ಹಾಂಗೂ ಸಂಸ್ಕೃತಿಕ ಒಳ್ಳಿಕಾಗಿ ಪ್ರಾಮಾಣಿಕ ಪ್ರಯತ್ನ ಮಾಡ್ದ ಇವರ್ದ್ ಸಾರ್ಥಕ ಬೊದ್ಕ್. ಇವರ ಸಮಾಜಮುಖಿ ಬೊದ್ಕ್‌ನ ಗುರ್ತಿಸಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಇವ್ಕೆ ತಾ. 03-01-2022ರಂದ್ ಗೌರವ ಪ್ರಶಸ್ತಿ ನೀಡಿ ಗೌರವಿಸಿದರ ಮತ್ತೊಮ್ಮೆ ಇಲ್ಲಿ ನೆನ್ಸಿಕಂಡವೆ. ಇಂಥ ಧೀಮಂತ ವ್ಯಕ್ತಿ ತಾ. 10-01-2022ರಂದ್ ತೀರಿಕಂಡೊಳೊ. ಇವರ ಆತ್ಮಕೆ ದೇವುರು ಚಿರಶಾಂತಿ ನೀಡಲಿ. ಎನ್.ಎಸ್. ದೇವಿಪ್ರಸಾದರ ಸದ್ಗುಣಗಳ ನಾವು ಜೀವನಲಿ ಅಳವಡಿಸಿಕಂಡ್ ಅವುಕೆ ಗೌರವ ಸಲ್ಲಿಸೊಮ.

**ಪುರುಷೋತ್ತಮ ಕಿರ್ಲಾಯ**




# ಆದರ್ಶ ವ್ಯಕ್ತಿಯಾಗಿ ದಿ. ಕುಲ್ಲಚನ ಕಾರ್ಯಪ್ಪನವು

• ಬಾರಿಯಂಡ ಜೋಯಪ್ಪ



ಶ್ರೀ ಕುಲ್ಲಚನ ಕಾರ್ಯಪ್ಪನವು ಸಾಧು ಸೊಬಾವದ ಸರಳ ವ್ಯಕ್ತಿಯಾಗಿದ್ದೊ. ಅವರ ಹೆಣ್ಣ್ ಶ್ರೀಮತಿ ಜ್ಯೋತಿ. ಜ್ಯೋತಿಯವರ ಪಾಲಿಗೆ ಅವು ದಾರಿ ದೀಪ. ಮಕ್ಕಳ ಪಾಲಿಗೆ ಪ್ರೀತಿಯ ಅಪ್ಪ ವಿದ್ಯಾರ್ಥಿಗಳಿಗೆ ಆದರ್ಶ ಗುರು. ಕೃಸಿ ಕ್ಷೇತ್ರಕ್ಕೆ ಮಾದರಿ ಕೃಸಿಕ. ಸಾಹಿತ್ಯ ಕ್ಷೇತ್ರಕ್ಕೆ ಒಳ್ಳ ಕವಿ. ಕವಿಗೋಸ್ಟಿಗಳ್‌ಲಿ ಕವನ ವಾಚನ. ಚುಟುಕು ಕವನಗಳ್‌ಲಿ ಆಳ ಮತ್ತೆ ತಮಾಸಿ. ಸ್ಮರಣ ಸಂಚಿಕೆಗಳ ಸಂಪಾದಕ. ಸೊಚ್ಚ ಕೈ. ಮಿತ ಬಾಸಿ. ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಕಣ್ಣಿಗೆ ಬಿದ್ದ ಕಾರ್ಯಪ್ಪನವ್ಕೆ 2017-18ರ ಸಾಲ್‌ಲಿ ಅಕಾಡೆಮಿನ ಗೌರವ ಪ್ರಶಸ್ತಿನ ಕಿರೀಟ.

ಶ್ರೀಯುತರ್ ಎಂ.ಎ. ಬಿ.ಎಡ್ ಪದವೀಧರರ್ ಬಿ.ಎ. ಪದವಿ ಆದಂಗೆ ಸುರೂಗೆ ಸೋಮವಾರ ಪೇಟೇಲಿ ಅರಣ್ಯ ಇಲಾಕೆಲಿ ಗುಮಾಸ್ತ ಕೆಲ್ಸಕೆ ಸೇರ್‍ದೊ. ಅಲ್ಲಿ ಕೆಲ್ಸ ಮಾಡಿಕಂಡಿರಕನ ಕೆಲ ಜನ ಪ್ರೀತಿಗೊ ಸ್ವಾರ್ಥಕ್ಕೊ ತರಕಾರಿನ ಬ್ಯಾಗ್‌ಲಿ ತುಂಬಿ ಅವರ ಕಚೇರಿಗೇ ತಂದ್ ಕೊಡ್ತಿದ್ದೊ ಗಡ. ಅದೆಲ್ಲಾ ಕಾರ್ಯಪ್ಪನವ್ಕೆ ಕುಸಿ ಆತಿತ್ಲೆ. "ಅದೆಲ್ಲಾ ಬೇಡ, ಹಿಂದಕೆ ತಕಂಡ್ ಹೋಗಿ"ತ ಎಸ್ಟೇ ಹೇಳಿರೂ ಒತ್ತಾಯ ಮಾಡಿ ಕೊಡ್ತಿದ್ದೊ. ಕೆಲ ಸರ್ತಿ ತರಕಾರಿಯೊಟ್ಟಿಗೆ ದುಡ್ಡುನೂ ಚೀಲದೊಳಗೆ ಇಸ್‌ತಿದ್ದೊ ಗಡ. "ಜನ ಹೇಳಿರೂ ಕೇಳ್ದುದಲೆಲಾ.. ಈ ಕೆಲ್ಸನೇ ಬೇಡ"ತ ಗ್ಯಾನ ಮಾಡ್ದ ಕಾರ್ಯಪ್ಪನವು ಆ ಕೆಲ್ಸಕ್ಕೆ ರಾಜೀನಾಮೆ ಕೊಟ್ಟ್ ಹೊರ ಬಂದೊ. ಕಾರ್ಯಪ್ಪನವರ್ದ್ ಸೊಚ್ಚ ಕೈನ ಪ್ರಾಮಾಣಿಕ ವ್ಯಕ್ತಿ ತೇಳಿಕೆ ಮತ್ತೆಂತ ಉದಾಹರಣೆ ಬೇಕ್?

ಮುಂದೆ ಯಂತ ಮಾಡ್ದು? ಎಂ.ಎ. ಓದಿದೊ. ಬಿ.ಎಡ್ ಪದವಿ ಪಡ್ದೊ. ಶಿಕ್ಷಣ ಇಲಾಕೆನೇ ಒಳ್ಳೆದ್‌ತ ಗ್ಯಾನ ಮಾಡ್ದೊ. ಶ್ರೀಮಂಗಲ ಜ್ಯೂನಿಯರ್ ಕಾಲೇಜ್‌ಲಿ ಶಿಕ್ಷಕರಾಗಿ ಸೇವೆಗೆ ಸೇರ್ದೊ. ಅಲ್ಲಿಂದ ಮತ್ತೆ ಭಾಗಮಂಡಲ ಜ್ಯೂನಿಯರ್ ಕಾಲೇಜ್‌ಲಿ ಉದ್ಯೋಗ ಪಡ್ದೊ. ಅಲ್ಲಿ ಇತಿಹಾಸ ಉಪನ್ಯಾಸಕರಾಗಿ ನಿವೃತ್ತಿ ಆದೊ.

ನಿವೃತ್ತಿ ಆದ ಮೇಲೆ ಮೂರ್ನಾಡ್ ಹತ್ರದ ಕುಂಬಳದಾಳುಲಿ ಕೃಸಿನ ಮುಂದೊರ್ಸಿದೊ. ಅಲ್ಲಿ ಹತ್ತಾರ್ ಜನಕೆ ಕೆಲ್ಸ ಕೊಟ್ಟೊ.

ಒಂದ್ ಗಂಡ್, ಇಬ್ಬರ್ ಹೆಣ್ಣ್ ಮಕ್ಕಳ ಲಾಯ್ಕ್ ಓದ್ಸಿ ಅವರ್ನ ಒಳ್ಳೊಳ್ಳೆ ಜವಾಬ್ದಾರಿ ಸ್ಥಾನಲಿ ನಿಲ್ಸಿದೊ.

ಓದು, ಬರಹ, ತೋಟ – ಹಿಂಗೆ ನೆಮ್ಮದಿನ ಬದ್ಕ್ ಬದ್ಕಿದೊ.

ಒಮ್ಮೆ ಒಂದ್ ಸಾಯಂಕಾಲದ ಹೊತ್ತ್‌ಲಿ ನಾ ಅವ್ಕೆ ಪೋನ್ ಮಾಡಿ "ಸರ್, ನಾಕಂಟೆ ಕಾಪಿ ಆತಾ"ತ ಕೇಳ್ದೆ. ಕೊಡಗ್‌ಲಿ "ನಾ ಕಂಟೆ ಕಾಪಿ" ಕುಡೆಲಿ, ಬುಡಲಿ ಅಂತೂ ಅದೊಂದ್ ಪದ್ಧತಿ ಈಗಳೂ ಉಟ್ಟು. ಹಂಗೆ ನಾ ಮಾಸ್ಟ್ರನ ಕೇಳ್ದೆ. ಆಗ ಅವು "ನೀವ್ ಎಂತಾತೇಳ್ರೆ? ಈಗ ಸಮಯ ಎಸ್ಟಾತ್‌ತ ನೋಡಿ. ಡೋಸ್ ಹಾಕುವ ಹೊತ್ತಾತ್" ಕೇಳಿ ನಗಾಡ್ತಿದ್ದೊ. ಇನ್ನೊಮ್ಮೆ ಯಾವ್ದೊ ಸಭೆಗೆ ಅವರ್ನ ಕರ್ದೆ. ಆಗ ಅವು "ಇನ್ನೆಲ್ಲಾ ಬಾಕೆ ಆದುಲೆ, ನೀವು ಕರ್ದರೀತ ಇಂದ್ ಬಂದೊಳೆ" ತೇಳಕನ ಅವರ ದೊನಿಲಿ ಆಯಾಸ ಆದಂಗಿತ್ತ್.

ಶ್ರೀಯುತರ ಬರವಣಿಗೆ ಗಾದೆಗಳ ಸುತ್ತಳೂ ಇತ್ತ್.

ಉದಾ:

1. ಅಂಗ್ಯೆನ ಮೇಂಗ್ಯೆ ಮಾಡಿವೆ, ಮೇಂಗ್ಯೆನ ಅಂಗ್ಯೆ ಮಾಡಿವೆ ಜನ.
2. ಅಂಗ್ಯೆ ಹಂಗೆ ಹೊಲ ಮಾಡಿರೆ ಮುಂಗ್ಯೆ ತುಂಬಾ ತುಪ್ಪ
3. ಅಂಡೆ ಬಾಯಿನಾರ್ ಕಟ್ಟಕ್ ದೊಂಡೆ ಬಾಯಿನ ಕಟ್ಟಿಕಾಕಿಲೆ.
4. ಅಂದಿಗೆ ಅದೇ ಸುಕ. ಇಂದಿಗೆ ಇದೇ ಸುಕ.

ಹಿಂಗೆ ಅವರ 'ಅ'ಕಾರಂದ ಸುರುವಾದೆ ಗಾದೆಗಳ ಗಮ್ಮತ್ತ್. ಇನ್ನೂ ಬೇಕಸ್ಟ್ ಗಾದೆಗಳ ಬರ್ದೊಳೊ.

**ಕವನಗ; 1. ಮಣ್ಣ್‌ನ ಮಕ್ಕಳ ಪಾಡ್**

ನೋಡಲ್ಲಿ ಮಣ್ಣ್‌ನ ಮಕ್ಕಳಾದ ನಮ್ಮ ಪಾಡ್
ಮಳೆಗಾಲಲಿ ಮೈ ಕೈಲೆಲ್ಲ ಗದ್ದೆ ಕೆಸ್ರ್
ಚಳಿಗಾಲ, ಬೇಸಿಗೆಲಿ ಹೊಡಿ ಮಣ್ಣ್‌ದೂಳ್
ಆಳವರ ಕಣ್ಣಿಗೆ ನಾವ್ ಅನ್ನದಾತರ್
ಬೇಸಾಯದ ಕೆಲ್ಸ ಎಂದೂ ಮುಗಿಯದ ಕೆಲ್ಸ
ಮಳೆ ಹಿಡಿಯಕಾಕನ ಎಡೆ ಬಿಡದೆ ಕೆಲ್ಸ
ನೊಗ ನೇಗ್ಲ್ ಜೋಡ್ಸೊಕು ಎತ್ತ್ ಹುಡ್ಕೊಕು
ಗೆರೆ ಕಾಡ್ ಕಡ್ದ್ ಮತ್ತದರ ಸುಡೊಕು
ಗದ್ದೆ ಹೂಡುದು, ತೋಡು ತಿದ್ದುದು
ಪುಣಿ ಕಡ್‌ದ್ ಹೊಗುಳು ಒಡಿಯದು
ಬೀಜ ಹಾಕುದು, ನಾಟಿ ನೆಡುವ
ಎತ್ತ್ ಕೊಡುದು, ನಾಟಿಗೆ ಹೋದು
ಮತ್ತೆ ಕಳೆ ತೆಗಿಯ ನೀರ್ (ನೋಡುಕು)
ಹೊಗುಳು ಕಟ್ಟಕು, ಒಡ್ಡ ಪುಣಿ ಮುಚ್ಚಕು
ಬೆಳೆ ಬರಗಂಟ ತಪ್ಪುದುಲೆ ತೋಟಕೆಲ್ಸ
ಕಾಡ್ ಮಣ್ಣ್ ಸುಡು ಮಣ್ಣ್‌ಗಳೊಡನಾಟ

ಬೇಸಾಯಗಾರನ ಕಸ್ಟ, ಕೃಸಿ ಪ್ರೀತಿ ಕಾರ್ಯಪ್ಪನವರಲ್ಲಿ ಹೆಂಗಿತ್ತ್‌ತ ಹೇಳ್ದರ ಈ ಕವನದ ಮೂಲಕ ಗೊತ್ತಾದೆ.

2. ನಮ್ಮ ಬಾಸೆ ನಮ್ಮದ್
ಅರೆ ಬಾಸೆತ್ತೇಳಿ
ಅರೆ ಗನ್ನಡತ್ತೇಳಿ
ಎರಡರ ಮೊದಲಕ್ಷರ
ಕನ್ನಡ ಅಕ್ಷರ ಮಾತಿನ
ಮೊದಲಕ್ಷರ ತಾನೇ?

ತಾನಿ ತಾನಿತ ಮನೆಲೆಲ್ಲಾ
ಬಿದ್ದೆದ್ದ್ ನಡೆಕನ
ಕಲ್ತಂತ ಬಾಸೆ ತಾನೇ?

ಅವ್ವನ ತೊಡೆ ಮೇಲೆ
ಬೆಚ್ಚಂಗೆ ಕುದಿದ್ದ್
ಅಪ್ಪನ ಹೆಗ್ಲೇರಿ
ಕೊಣ್‌ಕಂಡ್ ಇದ್ದ್
ಕಲ್ತಂತ ಬಾಸೆ ತಾನೇ

ನಮ್ಮ ಬಾಸೆ ಮೇಲೆ
ನಮಿಗಭಿಮಾನ ಇಲ್ಲರೆ
ನಮ್ಮಪ್ಪ ಅವ್ವನ ಪೂರಾ
ಮರ್ತಂಗೆ ತಾನೇ?

ಮನ್ನಿಟ್ಟ್ ಕಲ್ತರೆ
ಅಳ್‌ಕದೆ ಬಳ್ಸಿರೆ
ಶಾರದಾಂಬೆಗೆ ನಮ್ಮ
ನುಡಿ ಸೇವೆ ತಾನೇ?
ನಮ್ಮ ಬಾಸೆಯಿದ್
ಕನ್ನಡದ ಉಪಬಾಸೆ ತಾನೇ?

ಇದ್ ಕಾರ್ಯಪ್ಪನವ್ಕೆ ತನ್ನ ಬಾಸೆ ಮೇಲೆನ ಅಭಿಮಾನ ಮತ್ತೆ ಪ್ರೀತಿನ ತೋರ್ಸಿದೆ.

ಶ್ರೀಯುತರ್ ಕನ್ನಡಲೂ ಬರೆತಿದ್ದೊ. ಉದಾಹರಣೆಗೆ ಒಂದೆಕ್ಕ್ ಚುಟುಕಗಳ ಇಲ್ಲಿ ಕೊಟ್ಟೊಳೆ.

**ಕತ್ತಲೆ ಬೆಳಕು**

ಹಗಲಲ್ಲಿ ಒಂದು ಕ್ಷಣ
ಕಣ್ಣು ಮುಚ್ಚಿದರೆ ಸಾಕು
ಬರಿ ಕತ್ತಲು
ಬೆಳಕನ್ನು ಕಾಣುವ
ಮನ ವಿಲ್ಲದಿದ್ದರೆ
ಬಾಳೇ ಕತ್ತಲು

**ಉರುಳು ಸೇವೆ**

ತೊಟ್ಟು ಕಳಚಿದ
ಎಲೆ, ಹೂ ಹಣ್ಣು
ಉದುರುವುದು
ಭೂತಾಯ ಮಡಿಲಿಗೆ

ಬೇರು ಕಳಚಿದ
ಮರ ಸಲಿಸುವುದು
ಉರುಳು ಸೇವೆ
ಭೂತಾಯಲದುರಿಗೆ

ಹಿಂಗೆ ಅಧ್ಯಾತ್ಮ ಚಿಂತನೆಯ ಚುಟುಕಗಳ ಬರ್ದೊಳೊ. ಇನ್ನೂ ಪ್ರಕಟ ಆಗದ ಕವನಗಳ ಒಟ್ಟು ಮಾಡಿ ಪುಸ್ತಕ ಮಾಡೊಕುತ್ತೇಳುವ ಅಭಿಪ್ರಾಯ ಮನೆಯವರ್ದಾಗುಟು.

ಅರೆಬಾಸೆಲಿ ಬರ್ದ ಭಕ್ತಿಗೀತೆ "ಏಳ್ ಮಲೆಯಪ್ಪಾ... ತಿರುಪತಿ ತಿಮ್ಮಪ್ಪಾ...ಏಳಕನ ಗ್ಯಾನ ಮಾಡ್ನೆ ನಿನ್ನ ಯಾಗೊಳು"ತ್ತೇಳುವ ಗೀತೆ ಮಡಿಕೇರಿ ಆಕಾಶವಾಣಿಯ ಉದಯರಾಗ ಭಕ್ತಿಗೀತೆಗಳ ಕಾರ್ಯಕ್ರಮಲಿ ರೇಡಿಯೋ ಪ್ರಸಾರ ಮಾಡ್ತಾ ಇತ್ತ್, ಅಲ್ಲಿ ಪ್ರಸಾರ ಆಗ್ತಾ ಇರಕನ ಅದರ ಬರ್ದ ಕಾರ್ಯಪ್ಪನವರ ಸರ್ರ ತಣ್ಣಂಗೆ ಮಲಿತ್ತ್. ಶ್ರೀಯುತರ ಆತ್ಮಕ್ಕೆ ಚಿರಶಾಂತಿ ಸಿಕ್ಕಲಿ ದಿವಂಗತರ ಆದರ್ಶಗುಣಗ ಕಿರಿಯವುಕೆ ಮಾದರಿಯಾಗಲಿ.

ಕಾರ್ಯಪ್ಪನವು ಕಣ್ಣ್ ಬುಟ್ಟ ದಿನ 11, ಎಪ್ರಿಲ್ 1936
ಅವು ಕಣ್ಣ್ ಮುಚ್ಚಿದ ದಿನ 16, ಸೆಪ್ಟಂಬರ್ 2021

---

**ಬಾರಿಯಂಡ ಜೋಯಪ್ಪ**
ಮದೆ




# ಕಣ್ಮರೆ ಆಗ್‌ತ್ತಿರ್‌ವ ನಮ್ಮ ಹಳೆ ಉಡಿಗೆ ಪದ್ಧತಿ

● ಕಡ್ಯದ ಶ್ರೀಮತಿ ಪಾರ್ವತಿ ಕೃಷ್ಣಪ್ಪ

ನಮ್ಮ ಅರೆ ಭಾಷೆ ಗೌಡ ಪದ್ಧತಿಲಿ ಹುಟ್ಟಿದ ಕೂಸ್‌ಂದ ಹಿಡ್‌ದರೆ ವಯಸ್ಸಾಗಿ ಸಾಯುವವರೆಗೆ ನಮ್ಮ ಉಡಿಗೆಗ ಹಂತ ಹಂತಕ್ಕೆ ತಕ್ಕಂಗೆ ಬದ್‌ಲಾಗ್‌ತ್ತ ಹೋದೆ. ಕೂಸಿಗೆ ಉಡಿಗೆ ಹೆಂಗೆ ಹಾಕಿರು ನಡ್‌ದದೆ. ಬೆತ್ತಲೆ ಮೈಗೆ ಒಂದು ಚಾಲೆಮುಂಡು ಸುತ್ತಿರು ಆದೆ-ಸ್ವಲ್ಪ ಬೆಳ್‌ದ್ (8-12) ಫ್ರೌಡಾವಸ್ಥೆಗೆ ಬಾಕನ ಮೈ ಮುಚ್ಚೆ ಬಟ್ಟೆ ಹಾಕುವೆ-ಯೌವನಾವಸ್ಥೆಗೆ (12-18) ಬಾಕನ ಫಂಡ್‌ಲಿ ಗೂಡೇಗ ಸೀರೇನೇ ಉಡೋಕು, ಇಲ್ಲದಿದ್ದರೆ ಉದ್ದ ಲಂಗ ಹಾಕಿ ಸೊಂಟಂದ ಮೇಲೆ ಸೀರೆ ಸೆರ್‌ಗ್‌ನಂಗೆ ದಾವಣಿ ಹಾಕೋಕು ಅಥವಾ ಉದ್ದ ಲಂಗ ಜಂಪರ್ ಹಾಕ್‌ತಿದ್ದೊ.

ಇನ್ ಮದ್ವೆ ಆದವಂತೂ ಮನೆಂದ ಹೊರಗೆ ಹೋಕನ ಸೀರೆ ಉಡದೆ ಹೋಗ್‌ತ್ತಿತ್ಲೆ. ನೈಟಿಂತ್ತೋಳುದ್ ಅವುಕೆ ಗೊತ್ತೆ ಇತ್ಲೆ. ಊರ್ ಹಬ್ಬ, ಮೊದುವೆ, ಪೂಜೆ, ದೇವಸ್ಥಾನ, ಮನೆಕೊಡ್‌ದು, ಕೂಸ್‌ನ ತೊಟ್ಲಿಗೆ ಹಾಕುದು ಇಂತ ಯಾವುದೇ ಜಂಬರಕ್ಕೆ ಮದ್ವೆ ಆದ ಮುತ್ತೈದೆ ಹೆಣ್ಮಕ್ಕ, ಸೀರೆ ಉಟ್; ಹಣೆಗೆ ದೊಡ್ಡ ಕುಂಕುಮ ಬೊಟ್ಟಾಕಿ, ಕೈ ತುಂಬ ಕುಪ್ಪಿ ಬಳೆಗಳ ತೊಟ್, ತಲೆ ತುಂಬ ಹೂ ಮುಡ್‌ದ್ ಗುಂಪು-ಗುಂಪಾಗಿ ಹೋಕನ ಗಂಡಂದ್ರ್‌ಗೆ, ಅವರವರ



ಹೆಣ್ಮ್‌ಕ್ಕಳ ನೋಡ್‌ದೇ ಪೋರ್ಲ್.

ಮುತ್ತೈದೆ ಹೆಣ್ಮ್‌ಕ್ಕಳಿಗೆ ಏನ್ ಸಾವುರಾರ್ ರೂಪಾಯಿನ ಪಟ್ಟೆ ಸೀರೆನೇ ಬೇಕುಂತ್ತಿಲ್ಲೆ. ಈಗೆಲ್ಲಿ 100–200ರೂಗೆ ಓಳ್ಳೆ ಸೀರೆ ಸಿಕ್ಕಿದೆ ಅದೇ ಸಾಕ್ ಪಂಡ್‌ಲಿ ಸುಖದ ಮನೆಗಳಿಗಲ್ಲದೆ, ಕಷ್ಟದ ಜಂಬರಲಿ ಸನ ಸಾವುಗೆ ಶುದ್ಧಕ್ಕೆ, ತಿಥಿಗೆ ಬಿಳಿ ಸೀರೆ ಅಲ್ಲದೆ ಬೇರೆ ಯಾವ ಬಣ್ಣದ ಸೀರೆನು ಉಡ್‌ತ್ತಿತ್‌ಲ್ಲೆ. ಕಷ್ಟದ ಜಂಬರಕ್ಕೆ ಬಿಳಿ ಬಟ್ಟೆ ಹಾಕಿರೆ ಸತ್ತವರ ಆತ್ಮಕ್ಕೆ ಶಾಂತಿ ಸಿಕ್ಕಿದೆಗಡ–ಬಿಳಿ ಬಟ್ಟೆಲಿ ರೋಗ ನಿರೋದಕ ಶಕ್ತಿ ಉಟ್ಟುಗಡ. ಅಲ್ಲಿದ್ದ ಬೆಳಕ್‌ನ ಕಿರಣಗಳ್ನ ಪ್ರತಿ ಪಲಿಸಿದೆ ಗಡ. ಹಂಗಾಗಿ ಇನ್ ಮುಂದಕ್ಕಾರ್ ಎಲ್ಲವು ಈ ನಿಯಮನ ಪಾಲ್‌ಸೋಕುತ ಮನವಿ ಮಾಡ್ವೆ.

ನಮ್ಮ ಮದ್ವೆ ಜಂಬರಲಿ ಮುತ್ತೈದೆ ಹೆಣ್ಮ್‌ಕ್ಕ ತಲೆಕೂದ್‌ಲ್ ಮಾರುದ್ದ ಇದ್ದರು ಕುದ್‌ಲ್ ಹರಡಿ ಕಂಡ್ ಶಾಸ್ತ್ರ ಮಾಡಿವೆ. ಅಂತವರ ಕೈಲಿ ಶಾಸ್ತ್ರ ಮಾಡಿಕೆ ಬುಡ್‌ಕಾಗದ್. ಯಾಕೆಂತ್ತ್ಹೇಳ್ರೆ ತಲೆ ಹಂರ್‍ಡಿಕಂಡ್ ಕುರ್‌ದು, ಅವ್ವ–ಅಪ್ಪ ಗಂಡ ಸತ್ತರೆ ಮಾತ್ರ – ಮತ್ತೆ ಕೆಲವು ಮುತ್ತೈದೆಗ ಚೂಡಿದಾರ, ಪ್ಯಾಂಟ್, ಮಿಡ್ಡಿ, ಚಡ್ಡಿ ಹಾಕಂಡ್ ಬಂದವೇ ಶಾಸ್ತ್ರ ಮಾಡಿಕೆ. ಅಂತಹವುಕ್ಕೆ ಸನ ಅವಕಾಸ ಕೊಡ್‌ಬಡಿ. ಅವರ್ನ ಬಲ್ಲವರ ಮುಂದೆ ನೀ ಶಾಸ್ತ್ರಮಾಡಿಕೆ ಸೀರೆ ಉಟ್ ಬಾ ಹಿಂದಕ್ಕೆ ಕಳ್ಸಿ – ಹಿಂಗೆ ಮಾಡ್ರೆ ತೊಂದರೆ ಏನ್ ಇಲ್ಲೆ ಅವಳ ನೋಡಿ ಉಳ್‌ದ ಹೆಣ್ಮಕ್ಕ ಪಾಠ ಕಲ್‌ತ್ತವೆತ್ತ ಹೇಳಿಕೆ ಇಷ್ಟಪಟ್ನೆ.

ಈಗ ಒಂದು ಗೂಡೆನ ಮದ್ವೆ ಆಗುಟ ಇಲ್ಲೆತ ಗುರ್‌ತು ಹಚ್ಚಿಕೆ ಕುತ್ತಿಗೇಲಿ ತಾಳಿ ಉಟ್ಟಾ, ಕಾಲ್‌ಬೆರ್‌ಳ್‌ಲಿ ಕಾಲುಂಗುರ ಉಟ್ಟಾತ ನೋಡೋಕು. ಯಾಕೆಂತ್ಹೇಳ್‌ರೆ. ಅವುಳ್ ಹೈದಗಳಂಗೆ ಪ್ಯಾಂಟ್ ಟೀ ಶರ್‌ಟ್ ಹಾಕಂಡ್ ಇದ್ದದೇ, ಕೈಲಿ ಬಳೇನು ಇರ್‌ದುಲೇ, ಮೂಗುಲಿ ಮೂಗು ಬೊಟ್ಟು ಇರ್‌ದುಲೆ. ಜಡೇಲಿ ಹೂ ಇರ್‌ದುಲೇ, ಹಣೇಲಿ ಕುಂಕುಮ ಬೊಟ್ಟೂಂತು ಹತ್ರಲೇ ಇರದುಲೆ ಬ್ಯಾರೆ ಕಡೆ ಸಂತೆ, ಪೇಟೆ, ಮಾಲ್, ಪಿಕ್ಚರ್‌ಗೆ ಹೋಕನ ಹೆಂಗೆ ಬೇಕರೆ ಹೋಗಲಿ, ನೀ ಯಾಕೆ ಹಿಂಗೆ ಬಂದಂತ ಯೊರು ಕೇಳದುಲೆ, ಅಂದರೆ ದೇವಸ್ಥಾನ, ಪೂಜೆ, ಮದುವೆ, ಹಬ್ಬ, ಮನೆಕೂಡ್‌ದು, ಕೂಸ್‌ನ ತೊಟ್ಲ್ ಇಂತ್ತಲ್ಲಿಗೆ ಹೋಕನ, ಕಂಬಿ ಸೀರೇನೇ ಬೇಕುಂತ್ತಿಲ್ಲೆ ಸಾಧಾರಣ ಸೀರೆ ಉಟ್ಟ್, ಕೈಗೆ ಬಳೆ ತೊಟ್ಟ್, ಹಣೆಗೆ ಕುಂಕುಮ ಬೊಟ್ಟ್ಹಾಕಿ ತಲೆಗೆ ಒಂದು ಚೂರಾರ್ ಹೂ ಮುಡ್‌ದ್ ಮುತ್ತೈದೆ ಹೆಣ್ಮಕ್ಳ ಹೋಕು, ಹೆಣ್ಣ್ ತನನ ತೋರ್‌ಸಿಕಣಕು. ವಿದೇಶಿ ಉಡ್‌ಪುಗಳಿಗೆ ಮಾರು ಹೋಗದೆ ನಮ್ಮ ಅರೆಬಾಸೆ ಜನಾಂಗದ ಉಡುಪುನ ತೊಟ್ಟ್, ನಮ್ಮ ಹೆಮ್ಮೆನ ಹೆಚ್ಚಿಸಿ ಕಣಕುತ ಕೇಳಿ ಕಣೆ.

ನಮ್ಮ ಅರೆಬಾಸೆಗರ ಮದ್ವೇಲಿ ಸುರುಗೆ ಮದು ಮಕ್ಕಳಿಗೆ ಸೋದರ ಮಾವ ನೆಲ್ಲಿಕ್ಕಿ ಅಡಿಲಿ ಕಾಸ್ತಾಳಿ ಕಟ್ಟಿ ಎಣ್ಣೆ ಅರಿಸಿಣ ಶಾಸ್ತ್ರಕ್ಕೆ ಕೂರುಸುವೆ. ಆದರೆ ಶಾಸ್ತ್ರನ ಹೆಂಗೆ ಮಾಡೋಕುತ ಮಾತ್ರ 90% ಅಕ್ಕಂದ್ರಗೆ ಗೊತ್ಲೆ. ದೇವುರ ದೀಪಕೆ ಅಕ್ಕಿ ಹಾಕಿ ಕೈಗೆ 5 ಎಲೆ 1 ಅಡಿಕೆ ಕೊಟ್ಟವೆ. ಎಣ್ಣೇರಿಸಿಣನ ಮುಂದೆ ಮುಖಕ್ಕೆ, ಕೈಗೆ, ಕಾಲ್‌ಗೆ ತಿಕ್ಕುವೇ ಎಲೆಅಡಿಕೆನ ತೆಗ್‌ದ್ ಮಡ್‌ಗಿ ಕೈ ತೊಳಿಯಕ್ಕೆ ಗುಡ್ಡಕ್ಕೆ ಹೋದವೆ. ಅಲ್ಲಿ ಹೋಗಿ ನೊಡ್‌ರೇ ಎರ್‌ಡ್ ಬೆರ್‌ಳ ತುದಿಗೆ ಮಾತ್ರ ಅರಿಸಿಣ ಮುಟ್ಟಿದ್ದದೆ, ಯಾಕೆಂತ್ತ್ಳ್ರೆ ಉಗುರ್‌ನ್ ಬಣ್ಣ ಹೊಗ್ಬ್‌ಟ್ಟದೆ, ಉಗುರು ಹಾಳಾದೆತ ಹಂಗೆ ಶಾಸ್ತ್ರ ಮಾಡ್ದ್.

ಸರಿಯಾಗಿ ಶಾಸ್ತ್ರನ ನಂಗೆ ತಿಳ್‌ದ ಮಟ್ಟಿಗೆ ಪದ್ದತಿ ಪ್ರಕಾರ ಹೆಂಗೆ ಮಾಡುತ್ತಾ ಹೇಳ್ರ ಸುರುಗೆ ದೇವ್‌ರಿಗೆ ಅಕ್ಕಿ ಹಾಕಿ ಕೈ ಮುಗ್ದ್ 5 ಎಲೆ 1 ಅಡಿಕೆನ ಮದು ಮಕ್ಕಳ ಕೈಗೆ ಕೊಟ್, ಎರಡ್ ಕೈಗಳ್‌ಲಿ ಸ್ವಲ್ಪ ಅಕ್ಕಿ ತಕಂಡ್ ಕಾಲ್‌ಂದ ಮಂಡಿ, ತಲೆಗೆ, ಹೆಗಲ್, ತಲೆಗೆತ 3 ಸಲ ಅಕ್ಕಿ ಶಾಸ್ತ್ರ ಮಾಡೋಕು-ಮತ್ತೆ ಎಡಗೈಲಿ ಎಣ್ಣೆ ಚರ್‌ಕ್, ಬಲಗೈಲಿ ಎರ್‌ಡ್ ಕಟ್ ಗರಿಕೆಗಳ್ನ ಹಿಡೆಕಂಡ್ ಕಾಲ್ ಪಾದಕ್ಕೂ ಮಂಡಿಗೂ ಹಣೆಗೂ 3 ಸಲ ತಿಕ್ಕೋಕು. ಪುನ ಎರ್‌ಡ್ ಕೈಲಿ ಗರಿಕೆ ಕಟ್‌ಗಳ ಹಿಡ್‌ಕಂಡ್ ಮಂಡಿಗೂ, ಹೆಗ್‌ಲಿಗೂ ತಲೆಗೂ 3 ಸಲ ಮುಟ್ಟಿ ಶರಣ್ ತಕಣಕು. ಮತ್ತೆ ಬಗ್ಗೆ ಎಣ್ಣೆ ಅರಿಸಿಣನ ಎರ್‌ಡ್ ಕೈಗಳಿಗೆ ತಿಕ್ಕಿಕಂಡ್ ಪಾದಂದ ಕೋಟಾ ಕಾಲಿಗೂ ಬೆನ್ನಿಗೂ ತಿಕ್ಕಿ, ಎರ್‌ಡ್ ಕೈಗಳಿಗೆ ತಿಕ್ಕಿ, ಮತ್ತೆ ಮುಖದ ಭಾಗಕ್ಕೆ ತಿಕ್ಕೋಕು. ನಂತರ ಮದು ಮಕ್ಕಳ ಕೈಂದ ಎಲೇಡಿಕೆ ಕೇಳಿ ನಮಸ್ಕಾರ ಮಾಡಿ ಅರಿಸಿಣ ತಟ್ಟೇಲಿ ಮಡ್‌ಗೋಕು.

ಈ ಶಾಸ್ತ್ರ ಮಾಡ್‌ಕನ ಬೆರ್‌ಳ್ನ ಸೇರ್‌ದಂಗೆ ಕೈನ ಅಂಗೈ ಹಸ್ತ ಮುಟ್ಟುವಂಗೆ ತಿಕ್ಕೋಕು - ನಿಜ ಹೇಳೋಕುಂತ್ರದ್ರೆ ಮದ್‌ವೇಲಿ ಕಾಲ್‌ಂದ ತಲೆಕಡೆಗೂ ಸಾವುಲಿ(ಹೆಣಕ್ಕೆ) ತಲೆಂದ ಕಾಲ್‌ಕಡೆಗೆ ಎಣ್ಣೆ ಅರಿಸಿಣ ತಿಕ್ಕುದು ರೂಡಿಲುಟ್ಟು. ಇಲ್ಲಿ ನಾನು ಒಬ್ಬು ಹೆಣ್ಣೆ. ಬ್ಯಾರೆ ಹೆಣ್ಣ್ ಜನ್‌ರ್‌ನ್ ತಪ್ಪು ತಿಳಿಯದುತೇಲ್ಲ ಎನೋ ತಪ್ಪು ತಿಳಿಯದೆ, ಗೊತ್ತಿಲ್ಲದವು ಕಲ್‌ತ್‌ಕಂಡ್ ಮುಂದೆನೆ ಯುವ ಜನಾಂಗಕ್ಕೆ, ಮಕ್ಕಳಿಗೆ. ಇದರ್ನೆ ದಾರೆ ಎರೆಯೋಕುತ ಕೇಳಿ ಕಣೆ. ಹೆಣ್ಣ್ ಹೆತ್ತ ಅಪ್ಪ-ಅವ್ವಂದ್ರು ಸಂಸ್ಕೃತಿ, ಪದ್ಧತಿ ಬಗ್ಗೆ ತಿಳುವಳಿಕೆ ಹೇಳಿ ಕಲ್‌ಸುದು ಅವಶ್ಯಕತ ನನ್ನ ಅನಿಸಿಕೆ.

---

**ಕಡ್ಯದ ಶ್ರೀಮತಿ ಪಾರ್ವತಿ ಕೃಷ್ಣಪ್ಪ**
ಅವಂದೂರು

# ನೆರ್‌ದ ಮೊದುವೆ (ಋತು ಶಾಂತಿ)

ಉಷಾ ಪ್ರಭಾಕರ

ಹದಿನೆಂಟು ಗೋತ್ರದ ಗೌಡ ಜನಾಂಗ ಹತ್ತು ಕುಟುಂಬದವರೊಟ್ಟಿಗೆ ಸೇರಿಕೊಂಡು ಇಂದು ಸಮಾಜದಲ್ಲಿ ಒಳ್ಳೆ ಬಾಳ್‌ವೆನ ನಡೆಸಿಕೊಂಡು ಅವರದೇ ಆದ ಆಚಾರ ವಿಚಾರ ಕಟ್ಟುಪಾಡುಗಳ ಆಚರಿಸಿಕೊಂಡು ನೆಮ್ಮದಿಲಿ ಒಳೊ.

ಅರೆಭಾಷೆ ಗೌಡ್ರ್‌ಗ. ದಕ್ಷಿಣ ಕನ್ನಡ ಮತ್ತು ಕೊಡಗುನ ಗೌಡ್ರುಗ. ಹುಟ್ಟಿದಲ್ಲಿಂದ ಸಾಯಕನ ಮುಟ್ಟ ಬೇರೆ ಬೇರೆ ಪದ್ಧತಿಗಳ ಆಚರಿಸವೆ. ಅಂತ ಪದ್ದತಿಲಿ ನೆರ್‌ದ ಮೊದುವೆನು ಒಂದು. ಕಾಲಕ್ರಮೇಣ ಈಗ ಅಪರೂಪಕ್ಕೆ ಎಲ್ಲಿಯಾರ್ ಒಮ್ಮೆ ಇಂತ ಕಾರ್ಯಕ್ರಮಗಳ ಮಾಡುವೆ. ಈಗ ಹೆಚ್ಚಿನ ಹೆಣ್ಣ್‌ಮಕ್ಕ ವಸತಿಗೃಹಲಿ ಓದುಕನ ಗೂಡೆಗ ನೆರ್‌ದರೆ ಅಲ್ಲಿ ಏನು ಮಾಡಿಕೂ ಆದುಲೇ. ಹಾಂಗಾಗಿ ಕೆಲವು ಜನ ಗೂಡೆಗಳಿಗೆ ನೆರ್ದ ಮೊದುವೆ ಮಾಡ್‌ತ್ಲರೆ ಮದುವೆಗೆ ಮುಂದೆ ಕಳಸ ಸ್ನಾನ ಮಾಡ್ಸುವೆ.

## ನೆರ್‌ದ ಮೊದುವೆನ ಕ್ರಮ

ಹೆಣ್ಣ್ ಮಕ್ಕ ಪ್ರಾಯಕ್ಕೆ ಬಾದು, ದೊಡ್ಡವಳಾದು, ಋತು ಆದು, ಸಾಮಾನ್ಯವಾಗಿ ಹಿಂದಿನಕಾಲಲ್ಲಿ ಗೂಡೆಗ 14 ರಿಂದ 16 ವರ್ಷದವರೆಗೆ ಋತು ಆಗುತ್ತಿದ್ದ. ಆದರೆ ಈಗ ಗೂಡೆಗ 10 ವರ್ಷ ಆಕನಲ್ಲೆ ಋತು ಆದವೆ.

ಗೂಡೆಗ ಋತು ಆದ ಕೂಡ್ಲೆ ಅವಳ ಅಮ್ಮ ಗೂಡೆನ ಮನೆ ಒಳಗೆ ಬಾಕೆ ಬುಡ್‌ದುಲೆ. ಆ ಗೂಡೆನ ಕೈಗೆ ಒಂದು ಸಣ್ಣ ಕತ್ತಿ (ಪೀಚೆಕತ್ತಿ) ಕೊಟ್ಟು. ಹಲ್ಸಿನ ಮರದ ಬುಡಲಿ ಅಥವ ಮಾವಿನ ಮರದ ಬುಡಲಿ ಕುದ್ರಿಕೆ ಹೇಳುವೆ. ಮತ್ತೆ ಅವಳ ಅಮ್ಮ ನೆರೆಕೆರೆ 5 ಜನ ಮುತ್ತೈದೆಯರ ಬಾಕೆ ಹೇಳುವೆ. ಗೂಡೆಗೆ ತಲೆಗೆ ನೀರು ಹಾಕಿಕೆ.

## ನೀರು ಹಾಕುವ ಕ್ರಮ

ಮರದ ಬುಡಲಿ ಕುದ್ದ್ ಗೂಡೆನ ಅವಳ ಅಮ್ಮ ಗೂಡಗೆ ತಲೆಗೆ

ಸ್ವಲ್ಪ ಎಣ್ಣೆ ಕೊಟ್ಟು ಕರ್ಕಂಡ್ ಬಾದು. ಇಜ್ಜಾಲಿನ ಒಂದು ಬದಿಗೆ 5 ಅಥಾವ 3 ತೆಂಗಿನಕಾಯಿ ಒಗ್ಗಿ ಹಾಕಿ ಇಸುವೆ. ಗೂಡೆನ ಅದರ ಮೇಲೆ ಕುದ್ರುಸುವೆ. ಗೂಡೆನ 4 ಭಾಗಲಿ ಒಂದೊಂದು ಚೆಂಬು ನೀರಿಗೆ 5 ವೀಳ್ಯದೆಲೆ, ಅಡಿಕೆ ಹಾಕಿ ಕಮ್ಮುನ ಎರಡೆರಡು ಹಸಿ ಸೋಗೆಲಿ ಸಿಂಬೆ ಮಾಡಿ ಅದರ ಮೇಲೆ ಚೆಂಬು ಇಸೊಕು, ಗೂಡೆನ ಎದ್ರಿಗೆ ಒಂದು ಚೆಂಬು ಇಸೊಕು.

ಐದು ಜನ ಹೆಂಗ್ಸರು ಸಿಂಬೆ ಸಮೇತ ಚೆಂಬು ತಕೊಂಡು ಗೂಡೆನ ತಲೆಗೆ 5 ಜನ ಹೆಂಗ್ಸರು ಒಟ್ಟಿಗೆ ಎಲೆ ಮತ್ತು ಅಡಿಕೆ ಹಿಡ್‌ಕೊಂಡು ಗೂಡೆನ ತಲೆಗೆ 5 ಸರ್ತಿ ನೀರು ಚಿಪ್ಲುಸೋಕು(ಚಿಮುಕಿಸು). ಪುನಃ ಚೆಂಬುಲಿದ್ದ ಎಲ್ಲಾ ನೀರ್‌ನ ಗೂಡೆನ ತಲೆಗೆ ಹಾಕೋಕು. ಅದು ಆದ ಮೇಲೆ ಒಂದು ಹಿಡಿ ಬೆಳ್ತಿಗೆ ಅಕ್ಕಿನ ತೊಳ್ದ್ ಸ್ವಲ್ಪ ಬೆಲ್ಲ ಕಾಯಿ ಸೇರ್ಸಿ ಗೂಡೆಗೆ ಮತ್ತು ನೀರ್ ಹಾಕಿದ ಎಲ್ಲವುಕ್ಕೂ ತಿಂಬಕೆ ಕೊಡೋಕು. ಇಷ್ಟೆಲ್ಲಾ ಆದ ಮೇಲೆ ಗೂಡೆನ ಮೀಯಕೆ ಅವಳ ಅಮ್ಮ ಹಳ್ಳಕ್ಕೆ (ತೋಡು) ಕರ್‌ಕೊಂಡು ಹೋಗಿ ಮೀಸಿಕೊಂಡು ಬಂದವೆ.

ಗೂಡೆ ಮಿಂದು ಬಾಕನ ಆವಳಿಗೆ ತಿಂಬಕೆ ಮೆಂತೆ ಮಣ್ಣಿ (ತೊಳ್ಸಿನ ಹಿಟ್) ಮಾಡಿ ಕೊಟ್ಟವೆ. ಹಂಗೆ ಮನೆಲ್ಲಿದ್ದ ಎಲ್ಲದಕ್ಕೂ ತಿಂಬಕೆ ಕೊಡುವ ಕ್ರಮ.

ಗೂಡೆ ಮಿಂದು ಬಂದ ಮೇಲೆ ಅವಳಿಗೆ 16 ದಿನದ ಸೂತಕಂತ ಹೇಳಿ ಆಚರಿಸುವೆ. ನೆರ್‌ದಲ್ಲಿಂದ 3ದಿನ ಗೂಡೆ ಕೊಟ್ಟೆಗೆಲಿ ಇರುವ ಕ್ರಮ ಮಾಡುವೆ. ಗೂಡೆ ಕೊಟ್ಟಗೆಲಿ ಇರ್‌ಕನ ಅವಳಿಗೆ ತಿಂಬಕೆ, ಉಂಬಕೆ ಎಲ್ಲಾ ಅಲ್ಲಿಗೆ ಅವಳ ಅಮ್ಮ ತಂದು ಕೊಡುವ ಕ್ರಮ.

3ನೇ ದಿನ ಮೊಡ್ಯೊಳ್ತಿ ಬಂದ್ ದಳಿಯ ಕೊಟ್ಟು ಗೂಡೆ ಅದರ ಹಿಡ್‌ಕ್ಕೊಂಡು ನೀರುಲಿ ಮುಳುಗುವ ಕ್ರಮ ಮಾಡಿದ ಮೇಲೆ, ಮಡ್ಯೊಳ್ತಿ ಗೂಡೆನ ಮೀಸಿ ಮನೆಗೆ ಕರುಕ್ಕೊಂಡು ಬಾದು. (ಹಿಂದೆ ಗೂಡೆ ಋತು ಆಕನ ಇದ್ದ ಬಟ್ಟೆನ ಮಡ್ಯೊಳ್ತಿಗೆ ಕೊಡುವ ಕ್ರಮ ಇತ್ತು).

ಗೂಡೆಗೆ ತಲೆಗೆ ನೀರ್ ಹಾಕಿಕನ ಕುದ್ದ ತೆಂಗಿನ ಕಾಯಿನ ಒಂದರ ಹುಟ್ಟಿಕೆ ಇಸೋಕು, ಉಳ್ದ್ 2 ಕಾಯಿನ ದಿನಾ ಗೂಡೆಗೆ ಸ್ವಲ್ಪ ತಿಂಬಕೆ ಕೊಡುವ ಕ್ರಮ.

## ನೆರ್ದ ಮೊದುವೆ ಮಾಡುವ ಕ್ರಮ

16 ದಿನ ಕಳ್ದ್ ಮೇಲೆ ಗೂಡನ ಪಿಲೆ ತೆಗಿವಕ್ರಮ ಮಾಡುವೆ. 17ನೇ ದಿನ ಮಡ್ಯೊಳ್ತಿ ಬಂದು ಮಾಡುವ ಕ್ರಮ ಮಡ್ಯೊಳ್ತಿ ಇಲ್ಲದ ಊರ್‍ಲ್ಲಿ ಕ್ರಮ ಗೊತ್ತಿದ್ದ ಹೆಂಗಸರು ಮಾಡುವೆ. ಮಡ್ಯೊಳ್ತಿ ಬಾಕನ ಒಂದು ಸೀರೆ ತಂದದೆ. ಆ ಸೀರೆನ ಗೂಡೆಗೆ ಉಡ್ಸಿ ಪಿಲೆ ತೆಗಿವ ಕ್ರಮಮಾಡಿ 16 ದಿನಕ್ಕೆ ಮುಟ್ಟ ಆ ಮನೆಯವಕ್ಕೆ ಕುಟುಂಬದವುಕ್ಕೂ ಸೂತಕಂತ ಆಚರಿಸುವೆ 17ನೇ ದಿನ ಪುಣ್ಯ ನೀರ್ ತಂದು ಮನೆ ಶುದ್ಧ ಮಾಡುವೆ.

ಪಿಲೆ ತೆಗಿವ ಕ್ರಮ ಮಾಡ್‍ಕನ ತುಳಸಿಕಟ್ಟೆ ಬುಟ್ಟು ಇಜ್ಜಾಲಿನ ಒಂದು ಬದಿಲಿ ಸ್ವಲ್ಪ ಅಕ್ಕಿ ಹುಡಿ ಅಥವ ರಂಗೋಲಿ ಹುಡೀಲಿ ಒಂದು ಚೌಕ ಬರ್‍ದವೆ. 2 ಸಾಲು ಇರೋಕು. ಮಂಡಲದ ಚಿತ್ರ ಹಿಂಗಿರೋಕು.

ಚೌಕದ ಮಧ್ಯಲಿ ಗುಣಿಸು ಗುರುತು ಪೂರ್ವ ಪಶ್ಚಿಮವಾಗಿ ಹಾಕೋಕು. ಅದರ ಎದುರುಬದುರಾಗಿ 2 ಬಾಳೆಲೆ ಹಾಕುವೆ ಪೂರ್ವ ಬಾಳೆಲೆ ಮೇಲೆ ನರಬುಟ್ಟು ಗೂಡೆ ನಿಲ್ಲೋಕು. (ಆಚೀಚೆ ಕಾಲಿಸಿ). ಮತ್ತೆ ಗೂಡೆಗೆ ಒಂದು ಅಡಿಕೆ ಒಡ್ದ್ ಸಣ್ಣ ಹೋಳು ಮಾಡಿ 5 ಹೋಳು 5 ಸಣ್ಣ ವೀಳ್ಯದೆಲೆಗೆ ಸ್ವಲ್ಪ ಸುಣ್ಣ ಹಾಕಿ ಜಗಿಯಕೆ ಕೊಟ್ಟವೆ, ಗೂಡೆ ಜಗ್ದ್ ಮೇಲೆ ಎದುರಿಗಿದ್ದ ಬಾಳೆಲೆಗೆ ನರಬುಟ್ಟು ಉಗಿಯೋಕು.

## ನೂಲು ಹಾಕುವ ಕ್ರಮ

ಗೂಡೆ ಬಾಯಿಂದ ಎಲೆ ಅಡಿಕೆ ಉಗ್ದ್ ಮೇಲೆ ಒಂದು ನೂಲುಂಡೆ ಮತ್ತು ಬೆಳ್ಳಿಕಡಗೆ (ಬಾಯಿ ಇದ್ದದು) ನೂಲುನ ಒಂದು ಕೊಡಿ ಎಡಕಾಲಿನ ಹೆಬ್ಬೆರಳಿಗೆ ಒಂದು ಸುತ್ತ ಸುತ್ತಿ ಮೆಟ್ಟಿ ನಿಲ್ಲೋಕು. ಮತ್ತೆ ಕಡಗದ ಒಳಗೆ ತಂದು ನೂಲುನ ಗೂಡೆನ ತಲೆ ಮೇಲೆಂದ ಬಲಕಾಲಿನವರೆಗೆ ತಂದು ಮತ್ತೆ ಆಚೇಂದ ಈಚೆ ಕಾಲುಗೆ ಈಚೇಂದ ಅಚೆ ಕಾಲುನ ಅಡಿ ಮುಟ್ಟ ತಂದ್ ಮತ್ತೆ ನೂಲುನ ತುಂಡು ಮಾಡಿ, ಆಚೇ ಮತ್ತು ಈಚೇ ಕಾಲುಂದ ತೆಗ್ದ್ ಒಟ್ಟಿಗೆ ಮುದ್ದೆ ಮಾಡಿ ಎಲಡಿಕೆ ಉಗ್ದ್ ಬಾಳೆಲೆಗೆ ಹಾಕೋಕು, ಮತ್ತೆ ವಾಪಾಸು ಐದಾರು ಹೆಂಗಸರು ಚೆಂಬುಲಿ ಎಲೆ ಅಡಿಕೆ ತುಂಬಿಸಿ ಇಸಿದರ ತಕಂಡ್ ಗೂಡೆನ ತಲೆ ಮೇಲೆ ಒಂದು ಬಿಳಿ ಬೈರಾಸು ಹಿಡ್ದ್ ನೀರು ಚಿಪ್ಲ್‌ಸೋಕು. ಆಮೇಲೆ ಗೂಡೆನ ಅಮ್ಮ ಪಿಲೆತೆಗ್ದ್ ಮಂಡಲ ಬರ್‍ದ್ದರ ಮೇಲೆ ಸೆಗಣಿ ಉಜ್ಜಿ ಬಾಳೆಲೆ, ನೂಲುನ ಎಲ್ಲಾ ಒಟ್ಟಿಗೆ ದೂರ

ಬಿಸಾಡಿ ಹಳ್ಳಲಿ ಅಥವ ಬಚ್ಚಲು ಮನೇಲಿ ಸ್ನಾನ ಮಾಡಿ ಬರೋಕು. ಅಲ್ಲಿದ್ದ ಎಲ್ಲವೂ ತೀರ್ಥ ಹಾಕ್ಕಂಡ್ ಮತ್ತೆ ಗುಂಬ ಪೂಜೆ ಮಾಡೋಕು.

**ಗುಂಬ ಪೂಜೆ ಮಾಡುವ ಕ್ರಮ**

ಒಂದು ಕಮ್ಮನ ಬುಡ ಅಥವ ಚಾಳೆ ಬುಡಲಿ ಗುಂಬ ಪೂಜೆ ಮಾಡುವೆ.

ಗುಂಬ ಪೂಜೆಗೆ ಒಂದು ಪಾಡ ಬಾಳೆ ಹಣ್ಣು ಒಂದು ಸೇರ್‌ನ ನೆನ್ಯಕ್ಕಿ (ಕುಸ್ಲಕ್ಕಿನ ಹೊರ್‌ದ್ ಹುಡಿಮಾಡಿ ಸ್ವಲ್ಪ ಮೆಂತೆ ಹಾಕಿ ಹುಡಿಮಾಡಿ ಕಾಯಿ ಮತ್ತು ಬೆಲ್ಲ ಹಾಕಿ ಕಲ್ಸಿ) ತಯಾರು ಮಾಡಿಕೋಡೋಕು. ಒಂದು ಮಣ್ಣಿನ ಗುಂಬಲಿ ನೀರ್ ಹ್ಯೊಯಿದ್ ಅದರ ಮೇಲೆ 5 ಮಾವಿನ ಎಲೆ ಹಲ್ಸಿನ 5ಎಲೆ ಇಸಿ ಅದರ ಮೇಲೆ ಒಂದು ಚೆಂಬುಲಿ ಸ್ವಲ್ಪ ನೀರು ಹಾಕಿ ಅದರೊಳಗೆ 5 ವೀಳ್ಯದೆಲೆ. ಒಂದು ಅಡಿಕೆ ಅದರ ಮೇಲೆ ಒಂದು ಸುಲ್ದ ಕಾಯಿ ಇಸಿ ಚಾಳೆ ಬುಡಲಿ ಒಂದು ಹೊಸ ಒಲಿ ಚಾಪೆ ಹಾಕಿ ಅದಕ್ಕೆ ಸ್ವಲ್ಪ ನೀರ್ ಚಿಪ್ಲ್‌ಸಿ ಕಲಶ ಪಾತ್ರೆ ಗುಂಬನ ಬಲಭಾಗಕ್ಕೆ ಇಸಿ ಚಾಳೆಗೆ ಸ್ವಲ್ಪ ನೀರ್ ಹ್ಯೊದು ಗಂಧದ ಬೊಟ್ಟು ಡಾಕಿ ಚಾಪೆ ಮೇಲೆ ಐದ್ ಬಾಳೆಲೆ ಸಾಲಿಗೆ ಹಾಕಿ, ಗೂಡೆನ ಬಾಳೆಲೆಗೆ ನೀರ್ ಹಾಕಿ ಉಜ್ಜಿ, ಎಲ್ಲಾ ಬಾಳೆಲೆಗೂ ನೆನ್ಯಕ್ಕಿ ಸ್ವಲ್ಪ 3ಸರ್ತಿ ಇಕ್ಕೋಕು. ಮತ್ತೆ ಎಲ್ಲಾ ಬಾಳೆಲೆ ಮೇಲೆ ಒಂದೊಂದು ಬಾಳೆಹಣ್ಣು ಸುಲ್ದ್ ಇಸೋಕ್. ಮತ್ತೆ ಎಲ್ಲಾ ಬಾಳೆಲೆ ಮೇಲೆ ಎರಡೆರಡು ನೆನೆಬತ್ತಿ ಹೊತ್ತಿಸಿ ಬಾಳೆಲೆ ಮೇಲೆ ನರಬುಟ್ಟು ಕೊಡಿಗೆ ಬಲಬದಿಗೆ ಇಸೋಕು ಎಲ್ಲಾ ಬಾಳೆಲೆ ಕೊಡಿಗೂ ಗಂಧದ ಬೊಟ್ಟು ಹಾಕೋಕು. ಎರಡನೇ ಬಾಳೆಲೆಗೆ 5 ವೀಳ್ಯದೆಲೆ ಒಂದು ಅಡಿಕೆ ಇಸಿ. ಮತ್ತೆ ಒಂದು ತೆಂಗಿನಕಾಯಿ ತಕೊಂಡು ಕತ್ತಿಸಮೇತ ಹಿಡ್ಕಂಡ್ ಪೂರ್ವಕ್ಕೆ ಮತ್ತು ಪಶ್ಚಿಮಕ್ಕೆ ಕೈಮುಗ್ದ್ ಕಾಯಿನ ಒಡ್ಸೊಕು, ಕಾಲ್ ಮುಂಡ ಹಾಕಿ ಕಾಯಿ ನೀರ್ ಎಲ್ಲಾ ಬಾಳೆಲೆಗೆ ಬೀಳುವ ಹಾಂಗೆ ಒಂದು ಸುತ್ತು ತರೋಕು ಕಾಯಿಲಿ ಉಳ್ದ ನೀರ್‌ನ ಭೂಮಿಗೆ ಬುಟ್ಟು, ಮೂರ್‌ನೆ ಬಾಳೆಲೆ ಮೇಲೆ ಕಾಯಿಗಡಿ ಇಸಿಕೆ ಹೇಳಿ ಮತ್ತೆ ಗೂಡೆನ ಕರ್‍ಕೊಂಡು, ನೆನ್ಯಕ್ಕಿ  ಸ್ವಲ್ಪ ಅವಳ ಕೈಗೆ ಕೊಟ್ಟು 5 ಜನ ಅಥಾವ 7 ಜನ ಹೆಂಗ್ಸಗ ನೆನ್ಯಕ್ಕಿ ಹಿಡ್‌ಕ್ಕೊಂಡು ಬಾಳೆ ಬುಡಕ್ಕೆ ಸ್ವಲ್ಪ ಸ್ವಲ್ಪ ಹಾಕಿ ಐದು ಸುತ್ತು ಬಂದು ಸ್ವಲ್ಪ ಹೊತ್ತು ಎಲ್ಲೊವು ತಿರ್‌ಗಿ ನಿಲ್ಲೋಕು. ಮತ್ತೆ ಎಲೆ

ಅಡಿಕೆ ಇದ್ದ ಅಗೆಲ್‌ನ ಚಾಳೆಬುಡಕ್ಕೆ ಇಸಿ ಕಾಯಿಗಡಿ ಇದ್ದ ಅಗೆಲ್‌ನ ಗಂಡುಗಡಿ ಇದ್ದ ಅಗೆಲ್‌ನ ಹೆಣ್ಣ್ ಕೂಸಿಗೆ ಮತ್ತು ಹೆಣ್ಣ್ ಗಡಿ ಇದ್ದ ಅಗೆಲ್‌ನ ಗಂಡು ಕೂಸಿಗೆ ಕೊಡೋಕು. ಇನ್ನೊಂದು ಅಗೆಲ್‌ನ ಗೂಡೆಗೆ ತಿಂಬಕ್ ಕೊಡೋಕು ಒಂದ್ ಬಾಳೆಲೆದರ ಉಳ ನೆನ್ಯಕ್ಕಿ ಕುಕ್ಕೆಗೆ ಹಾಕಿ ಎಲ್ಲವುಕ್ಕು ತಿಂಬಕೆ ಕೊಡ್ದು.

ಗೂಡೆನ ಸೀರೆ ಸೆರ್ಗ್‌ನ ಸಿಂಬೆಮಾಡಿ ತಲೆಗೆ ಇಸಿ ಅದರ ಮೇಲೆ ಕಲಶಪಾತ್ರೆ ಇಸಿ ಗೂಡೆನ ಮನೆಗೆ ಕರ್‍ಕೊಂಡ್ ಬರೋಕು. ಬಂದ ಮೇಲೆ ಬಾಗ್ಲ್‌ಲ್ಲಿ ಅವಳಿಗೆ ಕುರುದಿ ನೀರ್ ಆರತಿ ಮಾಡಿ ಒಳಗೆ ಬಾಕೆ ಮಾಡೋಕು ನಡು ಕೋಣೆಲಿ ಕಲಶ ಪಾತ್ರೆನ ಗೂಡೆನ ಬಲಬದಿಗೆ ಚಾಪೆ ಮೇಲೆ ಇಸೋಕು. ಚಾಪೆನ ಪೂರ್ವ ಪಶ್ಚಿಮವಾಗಿ ಹಾಕುವ ಕ್ರಮ. ಅಲ್ಲಿ ಕಾಲ್ದೀಪ ಹೊತ್ತಿಸಿ ಗೂಡೆನ ಕುದ್ರಿಸಿ, ಹರಿವಾಣಲಿ ಸ್ವಲ್ಪ ಬೆಳ್ತಿಗೆ ಅಕ್ಕಿ ಹಾಕಿ ಗೂಡೆನ ಅಮ್ಮ ಸುರುಗೆ ಗೂಡೆಗೆ ಸೇಸೆ(ದೇಸೆ) ಹಾಕುವ ಕ್ರಮ ಮಾಡಿ ಗೂಡೆನ ಕೈಗೆ ಹಣ ಕಟ್ಟುವೆ. ಹಾಂಗೆ, ಬಂದವು. ನೆರೆ ಕರೆಯವು, ನೆಂಟ್ರಗ ಸೇಸೆ ಹಾಕಿ ಹಣ ಕಟ್ಟುವೆ. ಎಲ್ಲಾ ಆದ ಮೇಲೆ ಗೂಡೆನ ಅಲ್ಲಿಂದ ಎದ್ರಿಸಿ ಹಿರಿಯರ ಕಾಲ್ ಹಿಡುಸುವೆ. ಹಾಂಗೆ ಬಂದುವುಕ್ಕೆಲ್ಲ ಊಟ ಹಾಕಿ ಕಳ್ಸುದು. ಊಟ ಆದ ಮೇಲೆ ಸೋದರಮಾವ ಅವರ ಮನೆಗೆ ಕರುಕೊಂಡು ಹೋವ ಕ್ರಮ ಉಟ್ಟು.

ಈಗೀಗ ಈ ಕ್ರಮಗ ಎಲ್ಲಾ ಮಾಯಾಗಿ ನಮ್ಮ ಆಚಾರಣೆಗಳೇ ಗೊತ್ತಿಲ್ಲದೆ ಹಾಂಗೆ ಆಗುಟು.

**ಕ್ರಮಗಳ ಹೆಳ್ದ್‌ವು – ಹೊನ್ನಮ್ಮ ವಾಡ್ಯಪ್ಪನಮನೆ ಹರಿಹರ ಪಳ್ಳತ್ತಡ್ಕ**

---

**ಉಷಾ ಪ್ರಭಾಕರ**
ಕಿರಿಭಾಗ ಮನೆ, ಬಾಳುಗೋಡು




# ಕೈ ಮತ್ತ್ ಬುದ್ಧಿನ ಕಸರತ್ತ್ ಕೇರಂ ಆಟ

● ಸಂಗೀತಾ ರವಿರಾಜ್

ಸಣ್ಣ ಕೂಸ್‌ಂದ ಹಿಡ್ದ್ ಪ್ರಾಯ ಆದ ದೊಡ್ಡವುಸ ಇಷ್ಟಪಟ್ಟ್ ಆಡ್ವ ಒಂದ್ ಒಳಾಂಗಣ ಆಟಂತೇಳ್ರೆ ಅದ್ ಕೇರಂ. ಒಳಗೆ ಆಟಾಡ್ವ ಆಟ ಯಾವುದುಂತ ಯಾರೊಟ್ಟಿಗೆಸ ಕೇಳ್ರೆ ಹೇಳ್ವ ಉತ್ರ ಅದ್ ಕೇರಂ. ಚೆಸ್, ಟೇಬಲ್ ಟೆನ್ನಿಸ್, ಚೆನ್ನಮಣೆ ಹಿಂಗೆ ಬೇರೆ ಇದ್ದರುಸ ಅದರ ಎಲ್ಲವುಸ ಇಷ್ಟಪಟ್ಟ್ ಆಡುದ್ಲೆ. ಯಾಕೆಂತಹೇಳ್ರೆ ಅದೆಲ್ಲ ಹಂಞ ಪರಿಣತಿ ಬೇಕಾಗ್‌ವ ಆಟಗ. ಆದರೆ ಕೇರಂ ಹಂಗೆ ಅಲ್ಲ. ಎಲ್ಲ ವರ್ಗದ ಮೊನ್ಸರಸ ಆಕರ್ಸಣೆ ಮಾಡ್ವ ಬಲ ಈ ಕೇರಂ ಆಟಕುಟ್ಟುಂತ ಹೇಳ್ರು ತಪ್ಪಾದ್ಲೆ. ಯಾರೆ ಆದ್ರುಸ ನಂಗೆ ಕೇರಂ ಆಟ ಗೊತ್ಲೆಂತ ಕೂಡ ಹೇಳುವ ಹಂಗಿಲ್ಲೆ. ಸುರುನ ಸರ್ತಿನೆ ಆಟಕೆ ಕುದ್ದಂಗೆ ಕಲಿವ ಪ್ರಕ್ರಿಯೆಸ ಅಲ್ಲಿಯೆ ಆಗಿಬುಟ್ಟದೆ. ಇದುವೆ ಈ ಆಟದ ವಿಸೇಸ. ಸಣ್ಣ ಮಕ್ಕಸ ಸುರುಲಿ ಕುಟ್ಟಿಕಂಡ್ ತಟ್ಟಿಕಂಡ್ ಐದಾರ್ ಆಟ ಆಕನ ಅದ್ರ ಹಿಡ್ತಕ್ಕೆ ಬಿದ್ದ್ ಬುಟ್ಟವೆ. ಎಲ್ಲಸ ಖುಲ್ಲಂಖುಲ್ಲಂ ಕಾಣ್ವ ಈ ಆಟಲಿ ಮೋಸ ಮಾಡ್ವ ಪ್ರಮೇಯಸ ಬಾದ್ಲೆ. ಮೂರ್ ರೀತಿನ ಆಟ ಇರ್ವ ಇದರ್ಲಿ ಸಿಂಗಲ್ಸ್, ಡಬಲ್ಸ್ ಅಂತ ಸ ಮಾಡಿ ಆಡಿಕಣಕ್.

ಇಷ್ಟೆಲ್ಲ ನಂಗೆ ಒಮ್ಮಿಂದೊಮ್ಮೆ ಅದ್ಯಾಕೆ ನೆಂಪಾತ್‌ಂತ ಹೇಳ್ರೆ ಅದ್ಕೆ ಕಾರಣ ಕೊರೋನಾ. ಯಾರಿಗೆ ಪೋನ್ ಮಾಡ್ರುಸ, ಯಾರೊಟ್ಟಿಗೆ ಮಾತಾಡ್ರುಸ ಕೇರಂ ಆಡ್ತ ಒಳಾಂತ ಹೇಳ್ತಿದ್ದೊ. ಎಲ್ಲವರ ಈ ಉತ್ರ ನನ್ನ ಕುತೂಹಲನ ಜಾಸ್ತಿ ಮಾಡ್ತ್. ಕೊರೋನಾ ಮನೆಯವರ್ನೆಲ್ಲ ಒಟ್ಟುಗೂಡ್ಸಿರೆ ಕೇರಂ ಎಲ್ಲವರ ಒಗ್ಗೂಡ್ಸಿತ್ ಅಂತ ಹೇಳಕ್. ಲಾಕ್ ಡೌನ್ ಸಮಯಲಿ



ಕೇರಂಬೋರ್ಡ್ಗ್ ಡಿಮಾಂಡ್ ಹೆಚ್ಚಿ ಅಂಗಡಿಗಲ್ಲಿ ಇದ್ ಸಿಕ್ಕಂದಂಗೆಸ ಆಗಿತ್ತ್. ಕೆಲ್ಸಲಿ ಇದ್ದವೆಲ್ಲ ಇನ್ನ್ ಮನೆಲಿ ಕುದ್ದ್ ಮಾಡ್ದೆಂತಂತ, ಲೆಕ್ಕಂದ ಜಾಸ್ತಿ ದುಡ್ಡು ಕೊಟ್ಟ್ ತಕಂಡವುಸ ಒಳ. ಮನೆಲಿಯೆ ಇರ್ವ ನಮಿಗೆಲ್ಲ ಕೊರೋನಾ ಇರಿಕಾನಸ ಒಂದೆ, ಇಲ್ಲದಿರಿಕಾನಸ ಒಂದೆ ಅಂತ ಆಗ್ತಿತ್ತ್. ಆದರೆ ಮಕ್ಕ ಮನೆಲಿದ್ದದ್ ಮಾತ್ರ ವಿಸೇಸ ಆಗಿತ್ತ್. ನಮ್ಮಲ್ಲು ಕೂಡ ಮನೆಲಿ ಇರ್ವ ಮಕ್ಕ ಎಂತ ಮಾಡ್ದುಂತ ದೊಡ್ಡವು ಪುಳ್ಳಿಕಳಿಗೆ ಕೇರಂ ಬೋರ್ಡ್‌ನ ತಂದೊ. ಅದ್ರ ರುಚಿ ಸಿಕ್ಕಿದಂಗೆ ಪುರುಸೊತ್ತು ಆಕನೆಲ್ಲ ಕೇರಂ ಆಡ್ದೊಂದೆ ಕೆಲ್ಸ ಆಗಿಟು ಎಲ್ಲವ್ಕೆ ಮನೆಲಿ. ಮಕ್ಕಳ ಹಠಕ್ಕೆನು ಪುರುಸೊತ್ತು ಮಾಡಿಕಂಡ್ ಆಟಕ್ಕೆ ಕುದ್ದೊಂತ ಹೇಳ್ರುಸ, ನಾವುಗೆ ಒಳಗೊಳಗೆ ಆಸೆ ಉಟ್ಟುಂತ ಹೇಳಿಕಾದೆನ! ಯಾಕೆಂತೇಳ್ರೆ ನಾವು ದೊಡ್ಡವು. ಇದುವೆ ಕೇರಂ ಆಟದ ಆಕರ್ಸಣೆ.

ಹತ್ತೊಂಭತ್ತನೆ ಶತಮಾನಲಿ ನಮ್ಮ ದೇಶದ ಮಹಾರಾಜರ್‌ಗ ಈ ಆಟನ ಸುರು ಮಾಡ್ದೊಂತ ಹೇಳ್ರುಸ ಇದಿಕ್ಕೆ ಪುರಾವೆ ಕೊಡ್ವಂತಹ ಉದಾಹರಣೆಗ ಸಿಕ್ಕಿತ್ಲೆ. ಈಗ ಅದೆಷ್ಟೋ ದೇಸಗಲ್ಲಿ ಕೇರಂ ಆಟನ ಮಾಮೂಲಾಗಿ ಆಡುವೆ. ನಾವ್ ವಾಸಿಸ್ ವ ಹಳ್ಳಿ ಮಟ್ಟಂದ ಸುರು ಆಗಿ ವಿಶ್ವ ಮಟ್ಟದವರೆಗೆಸ ಕೇರಂ ಆಟದ ಛಾಂಪಿಯನ್ ಸ್ಪರ್ಧೆಗ ನಡ್ದದೆ. ನಮ್ಮ ಭಾರತ ದೇಸದ ಮಹಾನ್ ಕೇರಂ ಆಟಗಾರಂತ ಹೇಳ್ರೆ ಮರಿಯಾ ಇರುಡಯಂ. ಇವರ ಮೂಲ ಚೆನ್ನೈ. ಚೆನ್ನೈಲಿ ಹೆಚ್ಚ್‌ನ ಸಂಖ್ಯೆಲಿ ಕೇರಂ ಆಟಗಾರರ್ ಮತ್ತೆ ಪರಿಣಿತ ಆಟಗಾರರ್ ಒಳ. ಇರುಡಯಂ ಎರ್ಡ್ ಸರ್ತಿ ಕೇರಂ ಆಟಲಿ ವಿಶ್ವ ಛಾಂಪಿಯನ್ ಆಗ್ಯೊಳ. ಒಂಭತ್ತು ಸರ್ತಿ ರಾಷ್ಟ್ರೀಯ ಅಗ್ರಗಣ್ಯ ಛಾಂಪಿಯನ್ ಕೂಡ ಆಗಿದ್ದೊ. ಸುಮಾರ್ ಸಲ ತಂಡನ ಪ್ರತಿನಿಧಿಸಿ ಭಾರತನ ಗೆಲ್ಸ್ಯೊಳ. ಇವರೊಟ್ಟಿಗೆ ಆಡ್ವ ಇನ್ನೊಬ್ಬ ಉತ್ತಮ ಕೇರಂ ಆಟಗಾರಂತ ಹೇಳ್ರೆ ಆರ್ .ಆರೋಗ್ಯರಾಜ್. ಮರಿಯಾ ಇರುಡಯಂ ಪ್ರಸ್ತುತ ಚೆನ್ನೈಲಿ ಇಂಟರ್ ನ್ಯಾಷನಲ್ ಕೇರಂ ಅಕಾಡೆಮಿ ಎಂಬ ಸಂಸ್ಥೆ ಸ್ಥಾಪಿಸಿ ಅಪಾರ ಸಂಖ್ಯೆನ ಕೇರಂ ಪ್ರತಿಭೆಗಳ ಹೊರತಂದೊಳ. ಭಾರತ ಸರ್ಕಾರದ ಅತ್ಯುನ್ನತ ಅರ್ಜುನ ಪ್ರಶಸ್ತಿಸ ಇವ್ಕೆ ಕೇರಂ ಆಟದ ಸಲುವಾಗಿನೆ ಸಿಕ್ಕಿಟು. ನಾವುಗೆಲ್ಲ ಕೈಗೆ ಸಿಕ್ಕುವಂತ ಆಟ ಕೇರಂಲ್ಲಿಸ ಇಷ್ಟ್ ಮಹಾನ್ ಸಾಧನೆ ಮಾಡಕ್‌ಂತ ಹೇಳುದೆ ನಾವುಗೆಲ್ಲ ಖುಸಿನ ಸಂಗತಿ.

ಹಳ್ಳಿಗಳ್ಳಿ ಸಾಮಾನ್ಯ ಆಗಿ ಇರ್ಲ್ ಆಕಂಡ್ ಬಾಕನ ಹೈದಂಗೆಲ್ಲ ಸೇರಿಕಂಡ್ ಹತ್ರದ ಶಾಲೆ ಅಂಗಳಲಿ ಹಿಂಗೆ, ಏನಾರ್ ಆಟಲಿ ತೊಡಗಿಸಿಕಂಬದು ಮಾಮೂಲಾಗಿಟು. ಹಿಂಗೆ ಎಲ್ಲವು ಸೇರ್ವ ಅಂಗಡಿನೋ ಇಲ್ಲರೆ ಇನ್ನಾವುದೊ ಕಟ್ಟೆಲಿ ಕೇರಂ ಬೋರ್ಡ್‌ನ ಸ ಇಸಿಕಂಡ್ ಕೂಟುಗೆಲ್ಲ ಆಡ್ದು ಉಟ್ಟು. ಪಟ್ಟಾಂಗ ಹೊಡ್ಕಂಡ್, ಕುಸಾಲ್ ಮಾಡಿಕಂಡ್ ಆಡ್ವ ಈ ಆಟಂದ ಆಡವ್ಕೆ ನೋಡವ್ಕೆ ಎಲ್ಲವ್ಕೆ ಮನಸ್ಸಿಗೆ ಖುಸಿ ಸಿಕ್ಕಿದೆ. ಶಾಲೆಗೆ ಹೋಗ್ವ ಹೈದಂಗ, ಗೂಡೆಗಳಿಗೆಸ ಕೇರಂ ಸ್ಪರ್ಧೆಂತ ಹೇಳ್ರೆ ಬಾಳ ಖುಸಿ. ಬೇರೆ ಯಾವ ಆಟಕ್ಕೆಸ ಹೆಸ್ರು ಕೊಡದ್ದರುಸ ಕೇರಂ ಆಟಕೆ ಮಾತ್ರ ಹೆಸ್ರ್ ಕೊಟ್ಟೆ ಕೊಟ್ಟವೆ. ಆಟ ಭಾರಿ ಲಾಯ್ಕಲಿ ಗೊತ್ತಿರದಿದ್ರುಸ ಹೇಂಗಾರ್ ಆಟಾಡಿಕೆ ಆದೆಂತ ಧೈರ್ಯ ಇದ್ದದೆ. ಹಳ್ಳಿಗಳ್ಳಿ ಕೇರಂ ಪಂದ್ಯನ ಇಸಿರೆ ಹೆಚ್ಚ್ ಎಲ್ಲ ಜನಗ ಬಂದ್ ಆಟಕೆ ಸೇರುವೆ. ನಾನ್ ಸಣ್ಣದಿರಿಕಾನ ಶಾಲೆ ಕೇರಂ ಬೋರ್ಡ್ ಲಿ ಆಡಿಕಾನ ನಾಕೆ ಜನಕೆ ಆಡಿಕೆ ಆದುಂತ ಬೇಜಾರ್ ಮಾಡಕಣ್ತಿದ್ದದ್ ಈಗ ನೆನ್ಪಾದೆ. ಆಟದ ಪಿರೇಡ್ ಆದರೆ ಸಾಕ್ ನಾನ್ ನಾನ್‌ಂತ ಕೇರಂ ಬೋರ್ಡ್ ಗೆ ದೂಡಿಕಂಡ್ ಓಡ್ತಿದ್ದೊ. ರಜೆಗಳ್ಳಿಸ ಅಷ್ಟೆ ಮಕ್ಕ ಸೇರಿಕಾನ ಆಡ್ವ ಆಟ ಕೇರಂ. ಈಗ ಮನೆಗಳ್ಳಿ ಮಕ್ಕ ಸುಮ್ಮನಾರ್ ಮೊಬೈಲ್ ಲಿ ಆಟಾಡ್ವ ಬದ್ಲ್, ಮನೆವುಸ ಒಟ್ಟಿಗೆ ಕುದ್ದ್ ದ್ ಕೇರಂ ಆಟಲಿ ಆಸಕ್ತಿ ಬರುವಂಗೆ ಮಾಡಕ್. ಇದರ್‌ಂದ ಯಾವ ಮಕ್ಕಳಿಗು ಹಾನಿಂತ ಏನ್ ಆಕಿಲೆ. ಹೆಂಗೆ ಹೇಳ್ದು ಇದರ್ಲಿಯೆ ಉಷಾರಾಕಂಡ್ ಹೋಗಿ ಸಾಧನೆನು ಮಾಡುವಂತವು ಇರ್ವ.

ಎಲ್ಲವ್ಕೆ ಒಲಿವ ಈ ಆಟದ ಕಲೆಗೆ ಬೆರಳ್ ಗಳ ಕಸರತ್ತ್ ಒಬ್ಬೊಬ್ಬರದ್ ಒಂದೊಂದ್ ರೀತಿಲಿ ಇದ್ದದೆ. ಬೆರಳ್ ಗಳ ಕಸರತ್ತ್ ನೊಟ್ಟಿಗೆ ಮಂಡೆನಸ ಉಪಯೋಗಿಸಿಕಂಡ್ ಮನ್ಸಿಟ್ಟ್ ಆಡ್ರೆ ನಾವುಗೆ ಸಿಕ್ವ ಬಿಲ್ಲೆಗಳ ಸಂಖೆನು ಜಾಸ್ತಿ ಇದ್ದದೆ. ಒಟ್ನಲ್ಲಿ ಆಟ ಸುಲಭಲಿ ಒಲ್ದರುಸ ಗೆಲ್ಲಿಕೆ ಆಡ್ವ ಕೆಣಿನು ಬೇಕಾದೆ. ಎಲ್ಲ ಮೊನ್ಸರಸ ಆಕರ್ಷಿಸ್ವ ಕೇರಂ ಕೈ ಮತ್ತೆ ಬುದ್ಧಿನ ಭಾವ ಸಮ್ಮಿಲನ.

---

**ಸಂಗೀತ ರವಿರಾಜ್**

ಹೊಸೂರು




# ಮೆಲುಕು

● ಕಟ್ರತನ ಲಲಿತಾ ಅಯ್ಯಣ್ಣ

ಸ್ವಾತಂತ್ರ್ಯ ದಿನಾಚರಣೆ ದಿನ. ಮನೇಲಿ ಕುದ್ದ್‌ಕಂಡ್ ಟಿವಿಲಿ ಸ್ವಾತಂತ್ರ್ಯ ದಿನದಂದ್ ಮಂತ್ರಿ ಮಹೋದಯರ್ ಬಾವುಟ ಹಾರ್ಸಿ ಭಾಷಣ ಮಾಡ್ಕನ ನೋಡ್ಕನ ನನ್ನ ಹಿಂದಿನ ದಿನಗಳ ಗ್ಯಾನ ಬಾತ್.

ಆಗ ರಾಷ್ಟ್ರೀಯ ಹಬ್ಬತೇಳ್ರೆ ಎಷ್ಟೋ ದಿನಂದ ತಯಾರಿ ನಡ್ಯತಿತ್ತ್. ಪಿ.ಟಿ. ಪೀರಿಯಡ್‌ಲಿ ಹೈದಗ ಕತ್ತಿ ಕೊಟ್ಟು ತಕಂಡ್ ಶಾಲೆ ಆವರಣಲಿ ಬೆಳ್ದಿದ್ದ ಕಾಡ್‌ಕಡ್ಡ್ ಹುಲ್ಲು ಕೆತ್ತಿ ಸ್ವಚ್ಚ ಮಾಡ್ತಿದ್ದೊ. ಗೂಡೆಗ ಹುಲ್ಲುನ ಬಾಂಡ್ಲಿಲಿ ತಕಂಡ್ ಹೋಗಿ ಬಿಸಾಕ್‌ತಿದ್ದೊ. ಎಲ್ಲವೂ ಕುಶಿಲಿ ಕೆಲ್ಸ ಮಾಡ್ತಿದ್ದೊ. ಬದ್ಕ್‌ನ ಪಾಠ ಆಗಂದನೇ ಶುರು ಆಗ್ತಿತ್ತ್. ಶಾಲೆನ ಕಚೇರಿ ಗೋಡೆಲಿ ಇದ್ದ ಗಾಂದೀಜಿ, ನೆಹರು, ಲಾಲ್ ಬಹದೂರ್ ಶಾಸ್ತ್ರಿ ಇಂತ ನೇತಾರರ ಪೋಟ್‌ಗಳ್ನ ತೆಗ್ದ್ ವರಸಿ ತಯಾರಿ ಮಾಡ್‌ತ್ತಿದ್ದೊ.

ಈಗನ ಮಕ್ಕಳಂಗೆ ದಿನಕ್ಕೊಂದು ಬಟ್ಟೆ ಹಾಕಿಕೆ ಕಷ್ಟ ಇದ್ದ ಕಾಲ. ಇದ್ದ ನಾಕ್ ಜೊತೆ ಬಟ್ಟೆಲಿ ಲಾಯ್ಕ ಇರವಂತದನ್ನ ಒಗ್ದ್ ಇಸ್ತ್ರಿಪೆಟ್ಟಿಗೆಗೆ ಕೆಂಡ ಹಾಕಿ ಇಸ್ತ್ರಿ ಮಾಡಿ ಎಲ್ಲವೂ ಸ್ವಚ್ಛವಾಗಿ ಶಾಲೆಗೆ ಬಾರ್ತಿದ್ದೊ. ಆಗ ಸಾಧಾರಣವಾಗಿ ಎಲ್ಲರ ಮನೆ ಮುಂದುಗಡೆ ತರಾವರಿ ಹೂಗಳ್ನ ಬೆಳಿಯತಿದ್ದೊ. ಮಕ್ಕ ಗೊರಟೆ



ಹೂನ ಮಾಲೆ ಮಾಡಿ ತಾತಿದ್ದೊ. ಕೆಲವು ಒಂದೇ ಬಣ್ಣದ ಮಾಲೆನ ತಂದರೆ ಕೆಲವು ಮಕ್ಕ ಗೇಣಿ ಗೊಂದರಂಗೆ ಬಿಳಿ, ಗುಲಾಬಿ, ನೇರಳೆ, ನೀಲಿ ಬಣ್ಣದ ಗೊರಟೆ ಹೂ ಮಾಲೆನ ತಾತಿದ್ದೊ. ಫೋಟೋಗಳಿಗೆ ಮಾಲೆ ಹಾಕಿ ಸಿಂಗಾರ ಮಾಡ್ತಿದ್ದೊ. ಬಾವುಟ ಕಟ್ಟ್‌ಕನ ಮಕ್ಕ ತಂದ ಹೂಗಳ್ನ ಹಾಕಿ ಕಟ್ಟ್‌ತಿದ್ದೊ. ಬಾವುಟ ಹಾರ್ಸ್‌ಕನ ಎಲ್ಲರ ಮೇಲೆ ಹೂ ಹರಡಿ ಬೀಳ್ಕನ ಎಲ್ಲವ್ಕೂ ಖುಷಿ. ಬಾವುಟಕ್ಕೆ ಸಲ್ಯೂಟ್ ಹೊಡ್ಡ್ ರಾಷ್ಟ್ರಗೀತೆ ಜನ ಗಣ ಮನ ಹಾಡ್‌ಕನ ಮೈಯೆಲ್ಲ ರೋಮಾಂಚನ.

ಬಾವುಟ ಹಾರ್ಸಿ ಆದ ಮೇಲೆ ಮೆರವಣಿಗೆ. ಶಾಲೆನ ಲೀಡರ್‌ಗ ಗಾಂಧೀಜಿ, ನೆಹರು, ಶಾಸ್ತ್ರಿ, ಸುಭಾಷ್‌ಚಂದ್ರ ಬೋಸ್ ಹೀಗೆ ನೇತಾರರ ಪೋಟೋಗಳ್ನ ಹಿಡ್ಕಂಬತಿದ್ದೊ. ಅವರ ಹಿಂದೆ ಸ್ಕೌಟ್, ಗೈಡ್, ಸೇವಾದಳದವು ಮತ್ತೆ ಶಾಲೆನ ಉಳ್ದ ಮಕ್ಕ ರಸ್ತೆನ ಎರಡೂ ಕರೆಲಿ ಸಾಲೆಂದ ಪ್ಯಾಟೆಗೆ ಮುಟ್ಟ ಮೆರವಣಿಗೆ ಸಾಗ್‌ತಿತ್ತ್. ಭಾರತ್ ಮಾತಾ ಕಿ, ಮಹಾತ್ಮಗಾಂಧೀಕಿ, ಜವಾಹರಲಾಲ್ ನೆಹರುಕಿ, ಲಾಲ್ ಬಹಾದೂರ್ ಶಾಸ್ತ್ರೀಕಿ, ಸುಭಾಸ್‌ಚಂದ್ರ ಬೋಸ್‌ಕಿ ತ ಲೀಡರ್‌ಗ ಜಯಘೋಷ ಮಾಡ್ಕನ ಎಲ್ಲವೂ ಕೈನೇಚಿ 'ಜೈ'ತ ಹೇಳ್ತಿದ್ದೊ. ಸುಮಾರ್ ಅರ್ಧ ಕಿಲೋಮೀಟರ್‌ಕ್ಕಿಂತ ಜಾಸ್ತಿ ಮೆರವಣಿಗೆ ಸಾಗ್‌ತ್ತಿತ್ತ್. ದಾರಿ ಉದ್ದಕ್ಕೂ ಜನ ನಿತ್ತ್ ನೋಡ್ಕನ ಒಂತರಾ ಕುಶಿ. ವಾಪಾಸ್ ಶಾಲೆಗೆ ಬಾತಿದ್ದೊ. ಶಾಲೆಲಿ ಎಲ್ಲವ್ಕೂ ಚಾಕಲೇಟ್, ಅವಲಕ್ಕಿ ಪ್ರಸಾದ ಕೊಡ್ತಿದ್ದೊ. ಅವಲಕ್ಕಿ ಪ್ರಸಾದ ಮಾಡಿಕೆ ಎಲ್ಲಾ ಮಕ್ಕಳ ಕೈಂದ ನಾಕಾಣೆ (ಇಪ್ಪತ್ತೈದು ಪೈಸೆ) ವಸೂಲಿ ಮಾಡ್ತಿದ್ದೊ. ಅಂತು ಸಂಭ್ರಮಲಿ ಹಬ್ಬ ಮುಗಿತ್ತಿತ್ತ್.

ಹಂಗೆನೆ ಗಣರಾಜ್ಯೋತ್ಸವ, ಗಾಂಧಿ ಜಯಂತಿ, ಮಕ್ಕಳ ದಿನಾಚರಣೆ ಸಹ ನಡಿಯತ್ತಿತ್ತ್. ಈಗ ಕೊರೊನಾ ಬಂದ ಮೇಲೆ ಮಕ್ಕಳಿಗೆ ಶಾಲೆನೇ ಮರ್ತ್ ಹೋಗುಟ್ಟು. ಟಿವಿ–ಮೊಬೈಲ್‌ಲೇ ಬದ್ಕ್ ಸಾಗ್ತಾ ಉಟ್ಟು. ಈಗನ ಆಧುನಿಕ ಜಗತ್‌ಲಿ ಇದೆಲ್ಲಾ ಅಗತ್ಯ ವಸ್ತುಗಳೆ. ಕುದ್ದಲ್ಲೇ ಪ್ರಪಂಚನ ನೋಡುವಂತ ಕಾಲ. ಕಾಲ ಬಂದಂಗೆ ಕೋಲ ಕಟ್ಟಕುತ ಹಿಂದಿನವು ಹೇಳ್ತಿದದ್ ಗ್ಯಾನ ಆದೆ. ಸ್ಪರ್ಧಾತ್ಮಕ ಜಗತ್ತ್‌ಲಿ ಇದ್ ಅನಿವಾರ್ಯ ಕೂಡ. ಸರಿಸಮನಾಗಿ ಎಲ್ಲರೊಟ್ಟಿಗೆ ಸಾಗದಿದ್ದರೆ ಹಿಂದೆ ಉಳಿಯದಕಾದೆ. ಕಾಲಾಯ ತಸ್ಮೈ ನಮಃ

**ಕಟ್ರತನ ಲಲಿತಾ ಅಯ್ಯಣ್ಣ**
ಗಾಳಿಬೀಡು, ಮಡಿಕೇರಿ




# ಸ್ಕರಿಯ ಪುರಾಣ

● ಶಶಿಧರ್ ಬಿ.ಆರ್.

ನಾವು ಮೊದ್‌ಲೆಲ್ಲಾ ಮೊಣ್ಣ್‌ನ ನೆಲಲೇ ಕಾಪಿ ಒಣಗಿಸುತ್ತಿದ್ದೊ ಆಗೆಲ್ಲಾ ಮಾರ್ಚ್ ತಿಂಗಳ್‌ಲಿ ಕಾಫಿ ಹಣ್ಣಾಗಿ ಕುಯಿಲಿಗೆ ಬರ್ತಿತ್ತ್. ಈಗನಂಗೆ ಸ್ಪ್ರಿಂಕ್ಲರ್‌ಲಿ ನೀರ್ ಹಾಯಿಸಿ ಬೇಗ ಬೇಗ ಫಸಲು ಪಡೆಕು ಅಂತ ಬೆಳೆಗಾರರು ಆತುರ ಪಟ್ಟವೆ. ಯಾರಿಗೂ ಈಗ ಜಾಸ್ತಿ ದಿನ ಕಾಯಾಕೆ ತಾಳ್ಮೆ ಇಲ್ಲೆ. ಆಗೆಲ್ಲ ಕಾಪಿ ಕುಯಿಲು ಮಾಡಿ ಒಣಂಗಿಸ್‌ಕೆ ಕಣಕ್ಕೆ ಹಾಕಿ ಇನ್ನೇನ್ ಒಣಗಿತ್ ತೆಳ್‌ಕನ ಜೋರಾಗಿ ಮಳೆ ಬಂದ್ ಎಲ್ಲಾ ಹಾಳಾಗ್ತಿತ್ತ್. ಇದರ್‌ಂದ ನಾವು 80 ಅಡಿ ಉದ್ದ 30 ಅಡಿ ಅಗಲದ ಸಿಮೆಂಟ್ ಕಣ ಮಾಡ್ದೊ. ಅದ್ಕೆ ಸುತ್ತ ಕಟ್ಟೆ ಕಟ್ಟಿ ಪೊಲ್ಯುರ್ ಮಾಡ್ದೊ. ನಂಗೆ ಈ ಸಂಸಾರ ತಾಪತ್ರಯದಿಂದ ಬೇಸ್ರ ಆಕಾನ ಆ ಕಣದ ಕಟ್ಟೆ ಮೇಲೆ ಕುದ್ಕುಕೊಂಡ್ ಎದುರಿಗೆ ಪಾಳು ಬಿದ್ದ 2 ಎಕರೆ ಗದ್ದೆಲಿ ಬೆಳೆದಿದ್ದ ಬೇರೆ ಬೇರೆ ಬಗೆನ ಕುರುಚಲು ಗಿಡಲಿ ಹಾಡ್‌ತಿದ್ದ ಹಕ್ಕಿಗಳ ಹಾಡ್ ಕೇಳ್ತಾ ಮೈ ಮರೀತಿದ್ದೆ. ಹಕ್ಕಿಗಳ ನಾದಲೋಕ ಅದ್ರಲ್ಲೂ 2 ಕೊಕ್ಕ್‌ನ ಪಕ್ಷಿ ಅಂತ ನಾವೆಲ್ಲಾ ಕರೀತಿದ್ದ ಪಿಕಳಾರ ಜಾತಿಗೆ ಸೇರಿದ ಪಕ್ಷಿನ ಕೂಗು ನಂಗೆ ಬಾರೀ ಕುಸಿಕೊಡ್ತಿತ್ತ್. ಸಾಧು ಸಂತರಂಗೆ ಜಪತಪ ಮಾಡ್‌ಕ್ಕಿಂತ ಇದು ಒಳ್ಳೆದು ಅಂತ ನನ್ನ ಆಭಿಪ್ರಾಯ.

ಹೀಂಗೆ ಒಂದಿನ ನಾನ್ ಪಕ್ಷಿಗಳ ನಾದಲೋಕಲಿ ಮೈಮರೆತು ಕಣದ ಕಟ್ಟೆ ಮೇಲೆ ಕುದ್ರಿಕಾಕನ ಯಾರೋ ಇಬ್ಬರು ನನ್ನ ತಪಸ್ಸು ಭಂಗ ಮಾಡಿಕೆ ಅಂತನೇ ಬಂದೋ. ಹತ್‌ರ ಬಾಕನ ಅವರಲ್ಲಿ ಒಬ್ಬ ನಾವೆಲ್ಲಾ ಕುಂಟ ಬಾಲ ಅಂತ ಕರಿತಿದ್ದ ಬಾಲಕೃಷ್ಣ ಅಂತ ಗೊತ್ತಾತ್. ಅಂವ ಸಣ್ಣದಿರಿಕಾಕನ ಪೋಲಿಯೋ ಆಂತೇಳುವ ಕಾಯ್ಲೆ ಬಂದ್ ಅವ್ನ ಒಂದು ಕಾಲ್ ಕುಂಟಾಗಿತ್ತ್. ಆ ಬಗ್ಗೆ ಅವಂಗೆ ಏನೂ ಬೇಸ್ರ ಇತ್ಲೆ. ಕುಂಟನಾದರ್ ನೂರೆಂಟು ಕೆಲ್ಸಗಳನ್ನ ಮಾಡ್ತಾ ಊರೆಲ್ಲೆಲ್ಲಾ ಎಲ್ಲಾ ಜನ್ರಿಗೆ ಉಪಕಾರ ಮಾಡ್ವ ಮನುಷ್ಯ ಆಗಿತ್ತ್. ಆವ್ನೇ ತನ್ನನ್ನೆ ಕುಂಟ ಬಾಲ ಅಂತ ಪರಿಚಯ ಮಾಡಿಕೊಳ್ತಿತ್ತ್. ಅವನ್ನ ಹಂಗೆ ಕರೆದರೆ ಅವ ಬೇಜಾರ

ಮಾಡಿಕೊಳ್ತಿತ್ಲೆ. ಬಾಲ್ಯಲಿ ಅವ್ನ ಅಪ್ಪನ ತಿರಸ್ಕಾರದ ದೆಸೆಯಿಂದ ಬಾರಿ ಸ್ವಾಭಿಮಾನಿಯಾಗಿ ಅವ್ನ ಅನ್ನ ಅವ್ನೆ ದುಡಿದ್ ತಿಂತಿತ್ತ್.

ಬಾಲಕೃಷ್ಣನ ಜೊತೆಗೆ ಬಂದ ಇನ್ನೊಬ್ಬ ಬಿಳಿ ಶರ್ಟ್ ಬಿಳಿ ಪಂಚೆ ಹಾಕಂಡ ಮಧ್ಯ ವಯಸ್ಸು ದಾಟಿದ ಮನುಷ್ಯನಾಗಿದ್ದ, ಅವ್ನನ್ನ ಕುಂಟಬಾಲನೇ ನನಗೆ ಪರಿಚಯಿಸ್ತ್. ಇವ ಸ್ಕರಿಯಾ ಅಂತ. ವ್ಯವಸಾಯದಲ್ಲಿ ಬಾರೀ ಆಸಕ್ತಿ ಇರುವ ಮನುಷ್ಯ. ಹಾಗಾಗಿ ಶುಂಠಿ ಬೆಳೆ ಮಾಡುವ ಉದ್ದೇಶಂದ ಇಲ್ಲಿಗೆ ಬಂದದ್‌ಂತ ಬಾಲ ಹೇಳ್ತ್. ನಂಗೆ ಅವ್ನ ಹೆಸ್ರ್ ಕರಿಯ ಅಂತ ಕೇಳ್ತ್. ಆದ್ರೆ ಬಾಲ ಅವ್ನ ಹೆಸ್ರ್ ಕರಿಯ ಅಲ್ಲ ಸ್ಕರಿಯಾ ಆಂತ ಕೇರಳದ ಇಡುಕ್ಕಿ ಜಿಲ್ಲೆಯವ. ಅವ ಕ್ರಿಶ್ಚಿಯನ್ ಅಂತ ಮತ್ತೊಮ್ಮೆ ಸ್ಪಷ್ಟ ಪಡಿಸ್ತ್. ಅವ್ನ ಹೆಸ್ರೆ ವಿಚಿತ್ರ ಆಗುಟ್ಟಲ್ಲಾ ಅಂತ ನಂಗೆ ಆನಿಸ್ತ್.

ಮತ್ತೆ ಮಾತುಕತೆಲಿ ಅಂವ ನನ್ನ ಕಣದ ಎದ್ರುಗಿನ ಸುಮಾರು 20 ವರ್ಷಗಳಿಂದ್ ಪಾಳು ಬಿದ್ದಿದ್ದ ಎರಡು ಎಕ್ರೆ ಗದ್ದೆಲಿ ಶುಂಠಿ ಬೆಳೆ ಮಾಡ್‌ವ ಉದ್ದೇಶ ಇಟ್ಟ್ ನಿಮ್ಮ ಒಪ್ಪಿಗೆ ಕೇಳಿಕ್ಕೆ ಬಂದದ್ ಅಂತ ಹೇಳ್ತ್. ನಂಗೆ ಅವ್ರ ಮಾತ ಕೇಳಿ ಆಶ್ಚರ್ಯ ಆತ್. ಅಲ್ಲದೆ ಅವುಕೆ ಹುಚ್ಚು ಹಿಡ್ದಿರಕು ಅಂತ ತೀರ್ಮಾನ ಮಾಡ್ದೆ. ಏಕಂದ್ರೆ ಆ 2 ಎಕರೆ ಗದ್ದೆ ಸುಮಾರ್ 20 ವರ್ಷಂದ ಪಾಳು ಬಿದ್ದ ಭೂಮಿಯಾಗಿತ್ತ್. ಅಲ್ಲದೆ ಅಲ್ಲಿ ಆಳೆತ್ತರ ಗಿಡ ಗಂಟಿ, ಸಣ್ಣ ಮರಗ ಬೆಳ್ದಿತ್ತ್. ಇಷ್ಟೇ ಆಗಿದ್ರೆ ತೊಂದ್ರೆ ಇತ್ಲೆ. ಆ ಗದ್ದೆನ ಅರ್ಧಭಾಗ ತೀರಾ ಒಣ ಭೂಮಿಯಾಗಿದ್ದ್ ಉಳ್‌ದ ಅರ್ಧ ಭಾಗ ಗೊಸರು ಗದ್ದೆಯಾಗಿತ್ತ್. ರಣ ಬೇಸಿಗೆಲಿ ಆ ಗದ್ದೆನ ಅರ್ಧಭಾಗ ತೀರಾ ಕೆಸರಾಗಿ ಜೌಗು ಭೂಮಿಯಂತಿತ್ತ್. ನನ್ನ ಪಾಲಿಗೆ ಬಂದ ಈ ಭೂಮಿ ದನ ಮೇಯಿಸಿಕ್ಕೂ ಅಯೋಗ್ಯದ ಭೂಮಿ ಅಂತ ನಾನ್ ತೀರ್ಮಾನಿಸಿ ಹಂಗೇ ಪಾಳು ಬುಟ್ಟಿದ್ದೆ. ಈಗ ಅಲ್ಲಿ ಶುಂಠಿ ಹಾಕಿಕೆ ಲಕ್ಷಗಟ್ಟಲೆ ದುಡ್ಡ್ ಖರ್ಚು ಮಾಡ್ರೆ ಮಾತ್ರ ಕೃಷಿ ಮಾಡಕ್ಕೆ ಸಾಧ್ಯ ಇತ್ತ್. ಇಂತಹಾ ಪ್ರಯತ್ನ ಆತ್ಮಹತ್ಯೆಗೆ ಸಮ ಅಂತ ನಾವ್ ಮನಸ್‌ಲ್ಲೇ ಯೋಚಿಸಿಕನ ಸ್ಕರಿಯ ಎಕರೆಗೆ 10 ಸಾವ್ರದಂಗೆ 20 ಸಾವಿರ ಕೊಟ್ನೆ ಅಂತ ಹೇಳ್ತ್. ಈ ಮಾತ್ ಕೇಳಿ ನಂಗೆ ಮತ್ತೂ ಆಶ್ಚರ್ಯ ಆತ್. ನಿಜವಾಗಿ ಇವ್‌ಕೇನಾದ್ರೂ ಹುಚ್ಚು ಹಿಡ್ದುಟ್ಟಾ? ಈ ಪಾಳು ಭೂಮಿಗೆ ಒಂದೋ ಎರಡೋ ಸಾವಿರ ದುಡ್ಡು ಕೊಡುವ ಅಂತ ನಾನ್ ಅಂದಾಜ್ ಮಾಡ್ರೆ

ಇವು ಇಪ್ಪತ್ ಸಾವಿರ ಕೊಟ್ನೆ ಅಂತ ಹೇಳ್ತಾ ಒಳಲ್ಲಾ? ಏನಾದ್ರ್ ಆಗ್ಲಿ "ಸಿಕಿದ್ ಬುಟ್ರೆ ಕಲ್ತಿದ್ ಬುದ್ಧಿಯಲ್ಲ" ಅಂತೇಳುವ ಗಾದೆನೇ ಉಟ್ಟಲ್ಲ. ನಾನೀಗ ಜಾಣನಾಕು ಅಂತ ಸುಮ್ಮನಾದೆ. ಒಟ್ನಲ್ಲಿ ಅಡ್ವಾನ್ಸ್ ಅಂತ 5 ಸಾವ್ರ ಕೊಟ್ಟ್ ಇನ್ನೊಂದು ವಾರಲಿ ಬಾಕಿ ದುಡ್ಡು ಕೊಟ್ನೆ ಅಂತ ಹೇಳಿ ಜಾಗ ಖಾಲಿ ಮಾಡ್ದೊ.

ಮಾರ್ನೆ ದಿನಾನೆ ಹತ್ತ್ ಜನ ಮಲಯಾಳಿ ಗಂಡಸರೊಂದಿಗೆ ಸ್ಕರಿಯ ಗದ್ದೆಗೆ ಹಾಜರಾತ್. ಹೊತ್ತಾರೆ ಆರು ಗಂಟೆಂದ ಸೂರ್ಯ ಮುಳುಂಗುವ ತನಕನೂ ಯಾವ್ದೊ ದೆವ್ವ ಮೆಟ್ಟಿಕೊಂಡಂಗೆ ಆ ಪಾಳು ಬಿದ್ದ ಭೂಮಿಲಿ ಕೆಲ್ಸ ಸುರು ಮಾಡ್ದೊ. ಈ ಜನ್ಮಲೆ ಆ ಗದ್ದೆ ಉದ್ದಾರ ಆಕಿಲ್ಲೆ ಅಂತ ನಂಬಿದ್ದ ನಾನ್ ನೋಡು ನೋಡುತ್ತಿದ್ದಂಗೆ ಎಂಟೇ ದಿನಕ್ಕೆ ಕೃಷಿಯೋಗ್ಯ ಭೂಮಿಯಾಗಿ ಪರಿವರ್ತನೆ ಮಾಡ್ದೊ.

ಎಂತ ಚಿಂತೆನೂ ಇಲ್ದೆ ಒಂದೇ ಸಮನೆ ಆ ಜನ ಕೆಲ್ಸ ಮಾಡ್ದ. ಈ ಮಲಯಾಳಿಗ ನಮ್ಮ ಸ್ಥಳೀಯ ಜನರ ಅಂಗೆ ಅಲ್ಲ. 3 ದಿನ ಮಾಡಕಾದ ಕೆಲ್ಸನ ಒಂದೇ ದಿನ ಮಾಡಿ ಮುಗ್ತಿಸಿದೊ. ಅಲ್ಲದೆ ನಾನ್ ಗಮನಿಸಿದ ಒಂದು ವಿಚಾರ ತೇಳ್ರೆ ಈ ಮಲಯಾಳಿಗ ಹೊಟ್ಟೆಬಾಕರಲ್ಲ. ಕುಸುಲಕ್ಕಿ ಗಂಜಿ, ನಿಂಬೆ ಉಪ್ಪಿನಕಾಯಿ, ಹೊರ್ದ ಮೀನ್ ಇವಿಷ್ಟೇ ಅವ್ರ ಮೃಷ್ಟಾನ್ನವಾಗಿತ್ತ್. ಸ್ಕರಿಯಾ ಪ್ರಾಯದ ಅರಿವೇ ಇಲ್ದೆ ಒಂದೇ ಸಮನೆ ಕೆಲ್ಸ ಮಾಡ್ತಿತ್ತ್. ಕಡೆಗೆ ಅವೆಲ್ಲ ಊರಿಗೆ ಹೋದ ಮೇಲೆ ಸ್ಕರಿಯ ಜನ ನಮ್ಮ ತೋಟದ ಮನೇಲಿ ಉಳಿತಿತ್ತ್.

ನಮ್ಮ ಇನ್ನೊಂದು ಲೈನ್ ಮನೇಲಿ ಧಾರಕ್ಕ ಅಂತೇಳುವ ಒಂದು ಅಜ್ಜಿ ಮತ್ತೆ ಅದರ ಮಗಳ್ ವಾಸಕಿತ್ತ್. ಆ ಧಾರಕ್ಕಂಗೆ ಎಲ್ಲರ ಮೇಲೆ ಚಾಡಿ ಹೇಳುವ ಸ್ವಭಾವ ಇತ್ತ್. ಎಲ್ಲನೂ ಸಂಶಯಂದ ನೋಡ್ವ ಸ್ವಭಾವ. ಹಿಂಗಾಗಿ ಒಂದ್ ತಿಂಗ ಕಳೆಕನ ಈ ಧಾರಕ್ಕ ನಂಗೆ ಆಗಾಗ ಸ್ಕರಿಯನ ಬಗ್ಗೆ ದೂರು ಹೇಳಿಕ್ಕೆ ಸುರು ಮಾಡ್ತ್ ಅದೇನೆಂದರೆ ಈ ಸ್ಕರಿಯ ರಾತ್ರಿಯೆಲ್ಲಾ ನಿದ್ರೆ ಮಾಡುಲೆ. ರಾತ್ರಿಯಿಡೀ ಅವ್ನ ಮುರುಕಲು ರೇಡಿಯೋಲಿ ಆ ಸುಡುಗಾಡು ಮಲಯಾಳಿ ಹಾಡ್ ಕೇಳ್ತಾ ಕುದ್ಕುಕೊಂಡಿದ್ದದೆ. ಆಮೇಲೆ ಮಧ್ಯ ರಾತ್ರಿ ಎದ್ದ್ ಗದ್ದೆಕಡೆ ಹೋದ್ರೆ ಬೆಳಗೆ 9 ಗಂಟೆಗೇ ವಾಪಾಸು ಬಾದು ಅಂತ ಹೇಳ್ತ್. ನಾ ಅದಕ್ಕೆ ಜಾಸ್ತಿ ತಲೆ ಕೆಡಿಸಿಕೊಳ್ಳದೆ ಮೂತ್ರ ಮಾಡಿಕ್ಕೆ ಹೋಗಿರಾಕು ಅಂತ ಹೇಳ್ದೆ. ಅದ್ಕೆ ಧಾರಕ್ಕ ಎಂತ ಸ್ವಾಮಿ ನೀವು

ಹೇಳುದು ಮನುಷ್ರು 2–3 ಗಂಟೆ ಬುಡದೇ ಉಚ್ಚೆ ಮಾಡಿದೆನ ಅಂತ ಕೇಳ್ತ್. ನಂಗೆ ಏನು ಉತ್ತರ ಹೇಳ್‌ದು ಅಂತ ಗೊತ್ತಾತ್ಲೆ.

ಧಾರಕ್ಕಳ ಇಂತಹಾ ಗುಪ್ತಚರ ವರದಿಲಿ ಸ್ಕರಿಯ ರಾತ್ರಿ ಸಂಚಾರ ನನ್ನ ಗಮನ ಸೆಳೆತ್. ಅವಂಗೆ ಏನಾದ್ರೂ ಮಾನಸಿಕ ಸಂಘರ್ಷಕ್ಕೆ ಒಳಗಾದ ಅನೇಕ ವ್ಯಕ್ತಿಗಳಿಗೆ ಇರುವ ಹಾಂಗೆ ನಿದ್ರಾ ಸಂಚಾರದ ಕಾಯಿಲೆ ಇರದು ಅಂತ ಚಿಂತಿಸಿದೆ. ನಮ್ಮೂರಲ್ಲಿ ಹಿಂಗೆ ಯಾವುದೇ ಖಾಸಗೀ ವ್ಯಕ್ತಿಗಳ ಬದುಕಿನ ಸಮಸ್ತ ವಿವರಗಳೂ ಯಾರ ನಿಯಂತ್ರಣಕ್ಕೂ ಸಿಗದೆ ಜಗಜ್ಜಾಹೀರಾಗುವುದು ವಿಶೇಷವೇನಾಗಿರ್‌ತಿತ್ಲೆ. ಗಂಡ ಹೆಂಡರ ಜಗಳಂದ ಹಿಡಿದ್ ಅವು ತಿಂದ ದೋಸೆ ರೊಟ್ಟಿಗಳ ಲೆಕ್ಕಕೂ ಸಹ ಬಾಯಿಂದ ಬಾಯಿಗೆ ಹೋಗಿ ಊರೆಲ್ಲಾ ಪ್ರಚಾರ ಆಗ್‌ತಿತ್.

ದಿನಕಳ್ದಂಗೆ ಧಾರಕ್ಕನ ದೂರುಗ ಜಾಸ್ತಿ ಆದಂಗೆ ಸ್ಕರಿಯನ ಈ ನಿಗೂಢ ರಾತ್ರಿ ಪ್ರಯಾಣದ ಬಗ್ಗೆ ಗೂಢಾಚಾರಿಕೆ ಮಾಡಕುಂತ ನಾನ್ ತೀರ್ಮಾನ ಮಾಡ್ದೆ. ಹಿಂಗೆ ಒಂದು ತಿಂಗ ಕಳ್ದ ಮೇಲೆ ಈ ಬಗ್ಗೆ ದೃಢ ತೀರ್ಮಾನ ಮಾಡಿ ಒಂದು ಹುಣ್ಣಿಮೆದಿನ ರಾತ್ರಿ 8 ಗಂಟೆಗೆ ಸ್ಕರಿಯಂಗೆ ಗೊತ್ತಾಗದಂಗೆ ಅಂವ ಶುಂಠಿ ಬೆಳ್ದಿದ್ದ ಗದ್ದೆ ಹತ್ರಕ್ಕೆ ಹೋಗಿ ಕಣದ ಹತ್ರ ಇದ್ದ ದೊಡ್ಡ ಮರದ ಹಿಂದೆ ಅಡಂಗಿ ಕುದ್ದೆ. ರಾತ್ರಿ ಸುಮಾರು 10 ಗಂಟೆಗೆ ಸರಿಯಾಗಿ ಸ್ಕರಿಯ ನಿಧಾನಕ್ಕೆ ನಡ್‌ಕಂಡ್ ಬಾತ್. ಇಂವ ಕ್ರಿಶ್ಚಯನ್ ಜಾತಿಗೆ ಸೇರ್ದವನಾದ್ದರಿಂದ ಯಾವ್ದಾದ್ರೂ ಹೆಣ್ಣ್ ದೇವದೂತರ್ ಬಂದ್ ತಮ್ಮ ಲೋಕಕ್ಕೆ ಕರ್ಕೊಂಡ್ ಹೋಗಿ ಮತ್ತೆ ವಾಪಾಸು ಕರ್ಕಂಡ್ ಬರ್ತಿದೆನೋನೋ ಅಂತ ಅನುಮಾನ ಬಾತ್. ಏಕೆಂದ್ರ ಈ ಭೂತ ಪ್ರೇತ, ಪಿಶಾಚಿಗಲ್ಲಾ ರಾತ್ರಿಯೇ ಸಂಚಾರದ ಮಾಡ್ದು ಜಾಸ್ತಿ. ಏನಾದ್ರ್ ಆಗ್ಲಿ ಸ್ಕರಿಯನ ರಾತ್ರಿ ಸಂಚಾರದ ಈ ರಹಸ್ಯನ ಹೆಂಗಾದ್ರೂ ಮಾಡಿ ಭೇದಿಸೋಕು ಅಂತ ದೃಢ ನಿರ್ಧಾರ ಮಾಡ್ದೆ.

ಸ್ಕರಿಯ ಹತ್ರಕ್ಕೆ ಬಾಕನ ಅಂವನ ಹೆಗ್‌ಲ್ ಮೇಲೆ ಕೊಟ್ಟ್ ಇಟ್ಟ್‌ಕಂಡ್ ಬಾದು ಕಂಡತ್. ಇಷ್ಟೊತ್ತಿಗೆ ಕೊಟ್ಟು ಹಿಡ್ಕೊಂಡ್ ಯಾಕೆ ಹಿಂಗೆ ಬಂದದೆ? ಕೊಟ್ಟುಲಿ ಏನಾದ್ರೂ ನಿಧಿಗಿದಿ ಆಡಂಗಿಸಿ ಇಟ್ಟುಟ ಅಂತ ಅಚ್ಚರಿಂದ ನೋಡ್ದೆ. ಸ್ಕರಿಯ ಗದ್ದೆಗೆ ಹೋದವ ಕೊಟ್ಟು ತಕಂಡ್ ಲಾಯ್ಕಲಿ ಬೆಳೆದ್ ನಿಂತಿದ್ದ ಶುಂಠಿಗೆ ಮಣ್ಣ್ ಕೂಡಿಕೆ ಸುರು ಮಾಡ್ತ್. ಹುಣ್ಣಿಮೆ ದಿನದ್ದರಿಂದ ಎಲ್ಲ ಲಾಯ್ಕ್‌ಲಿ ಕಾಣ್ತಿತ್ತ್. ಈ ರಾತ್ರೀಲಿ ಹಿಂಗೆ

ಕೆಲ್ಸ ಮಾಡ್ದುನ್ನ ನೋಡ್ರೆ ಇವ ಹುಚ್ಚ ಇರೋಕು ಅಂತ ತೀರ್ಮಾನಿಸ್ದೆ. ಏನಾರು ಆಗ್ಲಿ ಸೀದಾ ಕೇಳೇ ಬುಡ್ನ ಅಂತ ಸ್ಕರಿಯನ ಹತ್ರ ಹೋಗಿ ಏನು ಸ್ಕರಿಯಾ ಹಿಂಗೆ ರಾತ್ರಿ ಕೆಲ್ಸ ಮಾಡ್ವ ನಿಂಗೇಕೆ ಅಂತ ಕೇಳ್ದೆ. ಅದಕ್ಕೆ ಅವ ಶಾಂತವಾಗಿ ಹಗಲ್ ವಿಪರೀತ ಬಿಸಿಲ್ ಇರೊದರ್ಂದ ಕೆಲಸ ಮಾಡ್ರೆ ಸುಸ್ತು ಆದೆ. ಅದ್ರ ಬದಲ್ ರಾತ್ರಿ ತಂಪಾದ ವಾತಾವರಣಲಿ ಕೆಲಸ ಮಾಡಿದ್ರೆ ಸುಸ್ತು ಆಲೆ. ಜಾಸ್ತಿ ಕೆಲ್ಸ ಮಾಡಕ್ ಅಂತ ಹೇಳ್ತ್. ನಂಗೆ ಅವ್ನ ಸ್ಥಿತಿ ನೋಡಿ ಪಾಪ ಅಂತ ಅನುಸ್ತು, ಹೊಟ್ಟೆಪಾಡಿಗಾಗಿ ಜನ ಎಷ್ಟು ಕಷ್ಟ ಪಟ್ಟವೆ ಅಂತ ಬೇಜಾರ್ ಆತ್. ಹಂಗೇ ಕೇಳ್ದೆ 'ಏನಪ್ಪಾ ನಿನ್ನ ವೈಯಕ್ತಿಕ ವಿಚಾರ ಯಾವತ್ತೂ ನಿನ್ನಲ್ಲಿ ಕೇಳ್‌ತ್ಲೆ. ನಿಂಗೆ ಹೆಂಡ್ತಿ ಮಕ್ಕೊ ಇಲ್ಲೆನೆ? ಯಾಕಂದ್ರೆ ಹೆಂಡ್ತಿ ಮಕ್ಕ ಇದ್ದವರು ಯಾರ್ ಹಿಂಗೆ ಕಷ್ಟ ಪಡಕ್ಕೆ ಸಾಧ್ಯನೇ ಇಲ್ಲೆ ಅಂತ ನನ್ನ ಭಾವನೆಯಾಗಿತ್ತ್. ಅದಕ್ಕೆ ಅವಕೊಟ್ಟ ಉತ್ತರ ನಂಗೆ ದಿಗ್ಭ್ರಮೆ ಹುಟ್ಟಿಸಿತ್.

ನನ್ನ ಹೆಣ್ಣ್ ಸತ್ತ್ 10 ವರ್ಷ ಆತ್. ಒಬ್ಬ ಮಂಜ ಇರ್ದು. ಅಂವ ಅಮೇರಿಕಾಲಿ ಸಾಫ್ಟ್‌ವೇರ್ ಇಂಜಿನಿಯರ್, ಅವಂಗೆ ತಿಂಗಳಿಗೆ 3 ಲಕ್ಷ ಸಂಬಳ ಅಂತ ಹೇಳ್ತ್. ಅವನ ಬಾಯಿಂದ ಇಷ್ಟೆಲ್ಲಾ ವಿವರ ಕೇಳ್ದ ಮೇಲೆ ಅಪ್ಪ ಮಂಜನ ಸಂಬಂಧ ಸರಿ ಇಲ್ಲೇನ ಅಂತ ಕೇಳ್ದೆ. ಏಕೇಂತೇಳ್‌ರೆ ಅಮೇರಿಕಾಲಿ ಇಂಜಿನಿಯರ್ ಆಗಿರುವ ಮಂಜ ಅಪ್ಪ ಹಿಂಗೆ ಹೀನಾಯಾಗಿ ಬಿಸ್‌ಲ್, ಮಳೆ, ಚಳಿ ಲೆಕ್ಕಿಸದೆ ಹಗಲೂ ರಾತ್ರಿ ದುಡಿಕಾಕನ ಅವ್ನ ನೋಡಿ ನೋಡದಾಂಗೆ ಹ್ಯಾಂಗೆ ಇರ್ದು? ಇಂವ ಎಲ್ಲೋ ದೊಡ್ಡ ಸುಳ್ಳು ಬುರುಕ ಆಗಿರಾಕು, ಅಥವಾ 60 ವರ್ಷದ ಅರಳ್ ಮರಳ್ ಇವಂಗೆ ಕಾಡ್ತಿರಾಕು ಅಂತ ಯೋಚ್ನೆ ಮಾಡ್ದೆ. ಆದ್ರೆ ಸ್ಕರಿಯಾ ಮಾತ್ ಮುಂದುವರ್‌ಸಿ ಹಂಗೇನು ಇಲ್ಲೆ. ನಮ್ಮ ಅಪ್ಪ ಮಂಜನ ಸಂಬಂಧ ಲಾಯ್ಕ್ ಉಟ್ಟು ಅಂತ ಹೇಳ್ತ್. ನಾನ್ ಮಾತ್ ಮುಂದುವರೆಸದೆ ಸುಮ್ಮನೆ ವಹಿಸಿದೆ.

ಸ್ವಲ್ಪ ದಿನಗಳ್‌ಲಿ ಸ್ಕರಿಯ ನನ್ನತ್ರ ಒಂದು ದೊಡ್ಡ ಕಾಗದ ತಂದ್. ಇಂಗ್ಲಿಷ್ ಭಾಷೆಲಿದ್ದ ಆ ಪತ್ರ ಒದಿಕ್ಕೆ ಹೇಳ್ತ್. ಏಕಂದ್ರೆ ಅವ್ನಿಗೆ ಮಲಯಾಳಿ ಬರ್ತ್ತೇ ಹೊರ್ತ್ ಇಂಗ್ಲೀಷ್ ಬರ್ತಿತ್ಲೆ. ಆ ಪತ್ರ ಸ್ಕರಿಯಂಗೆ ಅಮೇರಿಕಾಂದ ಅವನ ಮಂಜ ಜೇಕಬ್ ಮಸ್ಕರೇನಸ್ ಬರ್ದ ಪತ್ರ ಆಗಿತ್ತ್. ಅದ್ರ ಒಕ್ಕಣೆ ಹೀಂಗಿತ್ತ್:

ಪ್ರೀತಿಯ ಅಪ್ಪ ಈ ಪತ್ರದೊಟ್ಟಿಗೆ 2 ಸಾವಿರ ಡಾಲರ್ ದುಡ್ಡು ನಿನ್ನ ಸ್ವಂತ ಖರ್ಚಿಗೇಂತ ಕಳಿಸ್ತೊಳೆ. ನೀನ್ ಇಂಡಿಯಾಲ್ಲಿ ವ್ಯವಸಾಯ ಮಾಡ್ತಾ ಲಾಯ್ಕಿರೊಕು. ನಾವಿಲ್ಲಿ ಯಾಂತ್ರಿಕ ಬದುಕ್‌ಂದ ಬೇಸತ್ತ್ ಹೋಗೊಳೋ. ಇನ್ನ್ ಒಂದು ವರ್ಷ ಕಳ್ದ ಮೇಲೆ ನಾನ್ ನನ್ನ ಹೆಣ್ಣ್ ಮತ್ತೆ ಮಕ್ಕ ಸೃತ ಇಂಡಿಯಾಕ್ಕೆ ಖಾಯಂ ಆಗಿ ಬಂದವೆ. ಅಲ್ಲಿ ನೀನ್ ಹತ್ತ್ ಎಕ್ರೆ ಒಳ್ಳೆ ಭೂಮಿ ನೋಡ್. ನನ್ನ ಹೆಣ್ಣ್ ಮತ್ತೆ ಮಕ್ಕ ಸಹ ಕೃಷಿ ಮಾಡುವ ಉತ್ಸಾಹಲಿ ಓಳೊ. ಎಲ್ಲವುಕ್ ಅಮೇರಿಕಾದ ಸಂವೇದನಾರಹಿತ ಯಾಂತ್ರಿಕ ಬದ್‌ಕ್ ಬೇಸರ ತಂದುಟು. ಜಾಗ ತಕಂಬಕ್ಕೆ ದುಡ್ಡ್‌ನ ಯೋಚ್ನೆ ಮಾಡ್‌ಬಡ. ನೀನ್ ಕೇಳ್‌ದಷ್ಟು ದುಡ್ಡು ಕಳಿಸಿನೆ. ಕುದ್ದ್ ಸಂಪಾದಿಸುವ ಸಂಪತ್ತ್‌ಗಿಂತ ದುಡ್‌ದ್ ತಿನ್ನ್‌ವ ಅನ್ನಕ್ಕಾಗಿ ಇವೆಲ್ಲಾ ಹಂಬಲಿಸ್‌ತೋಳೊ. – ಇತಿ ನಿನ್ನ ಪ್ರೀತಿಯ ಜೇಕಬ್.

ಸ್ಕರಿಯನ ಮಂಜನ ಪತ್ರ ಓದಿ ನಾನ್ ನಿಜಕ್ಕೂ ಯಾವ ಯುಗದಲ್ಲಿ ಒಳೆ? ಗಾಂಧೀಜಿನ ನಾಡ್‌ಲಿ ಜನ್‌ಸಿ ಸರಳ ಸ್ವಾವಲಂಬನೆನ ಬದುಕ್‌ಗೆ ವಿದಾಯ ಹೇಳಿ ದುರಾಸೆಂದ ಭೌತಿಕ ಸಂಪತ್ತ್‌ನ ಹಿಂದೆ ಬಿದ್ದ್ ಸಂಪತ್ತ್ ಗಳಿಕೆ ಜೀವನದ ದೊಡ್ಡ ಧ್ಯೇಯ ಅಂತ ನಂಬಿ ಕೆಲ್ಸ, ಹೆಣ್ಣ್, ಮಕ್ಕ ಅಂತ ಸಂಸಾರದ ಸುಳಿಲಿ ಸಿಕ್ಕಿ ನಾವೆಲ್ಲಿ ಪ್ರಕೃತಿನ ಭಾಗ ಆಗಿ ನೈಜ ಕಾಳಜಿಂದ ಬದುಕ್‌ನ ಸಾರ್ಥಕತೆನ ಮಾತ್‌ಗಿಂತ ಕೃತಿಲಿ ತೋರ್‌ಸಿಕೆ ಮುಂದಾದ ಸ್ಕರಿಯನ ಕುಟುಂಬ ಎಲ್ಲಿ ಅಂತ ಅಚ್ಚರಿಯಾಗಿ ಅವಂಗೆ ಮನಸ್‌ಲ್ಲೇ ಕೋಟಿ ನಮಸ್ಕಾರ ತಿಳಿಸಿದೆ. ಸ್ಕರಿಯನ ದುಡಿಮೆನ ಹುಚ್ಚು ಎಂದು ಪರಿಗಣಿಸಿದ ನನ್ನ ದಡ್ಡತನಕ್ಕೆ ನಂಗೇ ನಾಚಿಕೆ ಆಗಿ ಇಂತಹ ಕುಟುಂಬಗ ನಮ್ಮ ದೇಶಲಿ ಸಾವಿರವಾಗಲಿ ಅಂತ ಹಾರೈಸಿದೆ.

ಮುಂದೆ ನಮ್ಮ ಗದ್ದೆಲಿ ಬೆಳೆದ ಶುಂಠಿ ಸ್ಕರಿಯಂಗೆ ಲಕ್ಷಗಟ್ಟಲೆ ಹಣ ಕೊಡ್ತ್. 2ನೇ ವರ್ಷಲಿ ಪಿರಿಯಾಪಟ್ಟಣದ ಹತರ 10 ಎಕರೆ ಜಮೀನ್ ತಕಂಡ್ ಯಾವ ಪ್ರತಿಫಲಾಪೇಕ್ಷೆ ಇಲ್ಲದೆ ಸ್ಕರಿಯನ ಇಡೀ ಕುಟುಂಬ ದುಡಿಮೆಗೆ ತನ್ನನ್ನ ತಾನೇ ತೊಡಗಿಸಿಕೊಂಡತ್. ಸ್ಕರಿಯನ ಕುಟುಂಬ ನೆಲದ ಪ್ರೀತಿಗೆ ಭೂಮಿ ತಾಯಿ ಪ್ರಸನ್ನಾಗಿ ಎರಡೂ ತೋಳುಗಳ್‌ಂದ ಬಾಚಿ ಸ್ವಾಗತ ನೀಡ್ತ್.

---

**ಶಶಿಧರ್ ಬಿ.ಆರ್.**
ಸಹಾಯಕ ಪ್ರಾಧ್ಯಾಪಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮಡಿಕೇರಿ.
ಮೊಬೈಲ್ : 9945915343

# ಇರೋ ಜೀವನಲಿ ಖುಷಿ ಕಾಂಬೋನೊ

● ಕವಿತಾ ಕಿರಣ್ ಜೈನೀರಾ

ಅಂದ್ ಒಂದ್ ಕಾಲ ಇತ್ತ್. ಅಲ್ಲಿ ಮನ್ಸಂಗೆ ನೆಮ್ಮದಿ ಇತ್ತ್. ದುಡಿಯೋಕು, ದುಡ್ಡ್ ತಿನೊಕು, ಮನೆಯೊಳಗೆ ಧವಸ ಧಾನ್ಯ ತುಂಬಿರೆ ಅದೇ ಖುಷಿಯ ಜೀವನ ಆಗಿತ್ತ್. ಬದ್‌ಕ್ ಈಗಿನಷ್ಟ್ ಅಭದ್ರತೆ ಅನ್ನಿಸ್‌ತಿತ್ಲೆ. ಮುಂದಿನ ವರ್ಷ ಇಷ್ಟ್ ತಾರೀಕಿಗೆ ಇಂತ ಕಡೆ ಪೋಯಿತ ಪ್ಲಾನ್ ಮಾಡ್ರೆ ಅಂದೆ ಹೋಗಿ ಬರ್ತಿದ್ದೊ. ಈಗ ಹಂಗಿಲ್ಲೆ ಒಂದು ವಾರಕ್ಕೂ ಜಂಬರ ಫಿಕ್ಸ್ ಮಾಡಿಕೂ ಮಧ್ಯೆ ಏನಾದರ್ ಬದ್ಲಾವಣೆ ಆದೇನೋತ ಭಯ ಆದೆ. ಅಂದರೆ ನಮ್ಮ ಆಧುನಿಕ ಜೀವನ ಅಷ್ಟು ದುರ್ಬಲ ಆಗುಟ್ಟಾತ ಅನ್ಸದೆ. ಚಿಕ್ಕವಿರ್‌ಕಾಕನ ಅವ್ವ ತಾತಂದಿರ್ ಪ್ರಳಯ ಭೂಕಂಪದ ಕಥೆ ಹೇಳ್‌ಕಾಕನ ಹಿಂಗೂ ನಡ್ದಿತ್ತಾತ ಕಣ್ಣಗಲಿಸಿ ಕೇಳ್ತಿದ್ದೊ. ನಾಳೆ ಭೂಕಂಪ ಆದೆ ಗಡತಾ ಸುದ್ದಿ ಕೇಳಿ ಎಲ್ಲಾ ಕೋಳಿ ಕೊಂದ್ ತಿಂದೋತ ಅಪ್ಪ ಹೇಳ್‌ಕಾಕನ ನೆಗಾಡ್ತಿದ್ದೊ. ಈಗ ಎರಡು ವರ್ಷದ ಹಿಂದೆ ಮಳೆ ಜಾಸ್ತಿ ಆಗಿ ಭೂಮಿ ಜರ್ದ್ ಪ್ರಳಯದ ಬಿಸಿನಾ ಎಲ್ಲಾ ಅನುಭವಿಸಿ ಬುಟ್ಟೊ. ಅಂದ್ ಇನ್‌ಪ್ಲುಯೆಂಜಾ, ಪ್ಲೇಗ್ ಮಾರಿ ಬಂದ್ ಊರಿಗೆ ಊರೇ ಖಾಲಿ ಆತ್‌ತಾ ಕೇಳ್‌ಕಾಕನ ಏನ್ ಅನ್ನಿಸಿತ್ಲೆ. ಈಗ ಕೊರೋನಾ ಮಹಾ ಮಾರಿ ಬಂದ್ ಮನ್ಸರ್‌ನ ತರಗೆಲೆತರ ಉದುರ್‌ಸಿ



ಹೋದು ನೋಡುಕಾಕನ ಇದೆಂಥ ಜೀವನಪ್ಪಾ, ಪುರಂದರದಾಸರ್ ಹೇಳ್ದಂಗೆ ಮನ್ಸನ ಜೀವನ ನೀರ ಮೇಲಿನ ಗುಳ್ಳೆ ಅಂತೇಳ್ದ್ ಸರಿ ಅನ್ಸಿದೆ.

ಆಗ 80–90 ದಾಟಿ ತಲೆ ಹಣ್ಣಾಗಿ, ಚರ್ಮ ಜೋತಾಡ್ದ ಮೇಲೆನೇ ಮನ್ಸ ಸಾಯೋದುತ ತಿಳ್ಕಂಡಿದ್ದೊ. ಈಗ ನೋಡ್ರೆ ವಯ್ಸ್ನ ಲೆಕ್ಕಾನೆ ಇಲ್ಲೆ. ಹಂಗೆ ನೋಡ್ರೆ ಆಗನ ರಾಗಿಮುದ್ದೆ, ರೊಟ್ಟಿ, ಕಡುಂಬಿಟ್ಟು ತಿಂದ ಹಿರಿಯರು ಈಗಲೂ ಲಾಯ್ಕ ಒಳೋ. ಇಂದ್‌ನ ಪಿಜ್ಜಾ ಬರ್ಗರ್, ನೂಡಲ್ಸ್, ಉಪ್ಪಿಟ್ಟುತ ಸತ್ವಂಶ ಇಲ್ಲದ ಆಹಾರ ತಿಂದವು ಬಾಳ ಬೇಗ ವಯಸ್ಸಾದಂಗೆ ಕಾಣ್ತಾ ಒಳೋ. ಪಿಳ್ಳೆಕಳ ಮೊಬೈಲ್, ಕಂಪ್ಯೂಟರ್ ಚುರುಕುತನನ ಅಚ್ಚರಿಂದ ನೋಡ್‌ತಿದ್ದವ್ ತಾತ ಅವ್ವಂದಿರು. ಈಗ ಅವ್ರ ಆರೋಗ್ಯದ ಗುಟ್ಟ್ ಹೆಂಗೆತಾ ಪಿಳ್ಳೆಕ ಕಣ್ ಬುಟ್ ನೋಡುವ ಹಂಗಾಗುಟ್ಟು.

ಅಂದ್‌ನ ಕಾಲಲಿ ಹಣವಂತರ್ ತುಂಬಾ ಕಮ್ಮಿ ಇದ್ದೊ. ಇದ್ದವೂ ತೋರ್ಸಿಕಣ್‌ದೆ ಸರಳ ಜೀವನ ನಡ್ಸ್‌ತಿದ್ದೊ. ಇಂದ್ ಹಂಗಿಲ್ಲೆ ಆಧುನಿಕ ಜೀವನಲಿ ನಾವು ಲಾಯ್ಕ ಒಳೋತ ತೋರ್ಸಿಕಣೋದರ್ಲೇ ನಮ್ಮ ಜೀವನ ಎಲ್ಲಾ ಮುಗ್ದಿದ್ದದೆ. ಯಾವುದೋ ಆಶಾಗೋಪುರ ಪೂರ್ಣ ಮಾಡೋ ಭರಲಿ ನಮ್ಮ ವಯ್ಸ್ನ ಆಸೆಗಳ್ನ ಕಳ್ದಿದ್ದವೆ. ನಮ್ಮ ಯಾಂತ್ರಿಕ ಜೀವನ ಎಷ್ಟ್ ವೇಗ ಉಟ್ಟುತೇಳ್ರೇ ಒಳ್ಳೆ ಪದಾರ್ಥ ತಯಾರ್ಸಿ ತಿಂಬೋಕು ಟೈಮ್ ಇಲ್ಲದೆ ಎಲ್ಲಾ ರೆಡಿ ಫುಡ್‌ಗೆ ಅಂಟಿಕೊಂಡೊಳೊ. ವೀಕೆಂಡ್‌ಗೆ ಹೊರಗೆ ಲಾಯ್ಕ್ ಕಾಂಬೋಂತಹ ಗ್ಲಾಸ್ ರೂಮ್‌ನ ರೆಸ್ಟೋರೆಂಟ್ ಒಳಗೆ ಕುದ್ದು ನಾಲಿಗೆಗೆ ರುಚಿ ಕೊಡೊಂತ ಆರೋಗ್ಯಕ್ಕೆ ಹಾನಿ ಮಾಡೋಂತಹ ಪದಾರ್ಥ ತಿಂದ್ ಬಿಲ್ ಟಿಪ್ಸ್ ಎಲ್ಲಾ ಕೊಟ್ಟ್ ಖುಷಿಲಿ ಹೊರಗೆ ಬಂದವೆ. ಹಿಂಗೆ ಹೊರ್ಗೆ ತಿಂಬೋದು ಆರೋಗ್ಯಕ್ಕೆ ಕೆಟ್ಟದ್‌ತ ಗೊತ್ತಿದ್ದರೂ ನಾಲಿಗೆ ಚಪಲ ಬುಡಿಕಾದುಲೆ. ಇನ್ನ್ ಮದುವೆ, ನಿಶ್ಚಿತಾರ್ಥ, ಕೂಸುನ ಹೆಸರಿಡ್ದು, ಇನ್ನಿತರ ಜಂಭರಗಳ್ನ ತಾಕತ್ತ್ ಮೀರಿ ಮಾಡಿ ಸಾಲಲಿ ಸಿಕ್ಕಿಕಂಡವೆ. ಈಗನ ಹೆಚ್ಚಿನ ಮಕ್ಕ ಲಾಯ್ಕ ಓದಿ, ಮಾರ್ಕ್ ತೆಗ್ದ್ ಒಳ್ಳೆ ಕೆಲ್ಸ, ಚೆಂದದ ಗೂಡೆ, ಓಡಾಡಿಕೆ ಕಾರ್ ಇಷ್ಟ್ ಮಾಡುದೆ ನಮ್ಮ ಜೀವನಾತ ಅಂದ್‌ಕಂಡಿದ್ದೊ. ಆದರೆ ಈ ಕೋರೋನ ಸಂಕಷ್ಟದ ಟೈಮ್‌ಲಿ ಪಾಠ ಕಲ್ತ್ ತುಂಬಾ ಮಕ್ಕ ಹಳ್ಳಿಗೆ ಬಂದ್ ಕೃಷಿ ಮಾಡಿ ಖುಷಿ ಪಡ್ತ ಇರ್ದು ಒಳ್ಳೇ ಲಕ್ಷಣ.

ಈಗ ಮುಖ್ಯ ವಿಷ್ಯಕ್ಕೆ ಬರೋಮೊ, ಇಂದ್‌ನ ಸಮಾಜಲಿ ಜನ

ಕಷ್ಟ ಪಟ್ಟ್ ಎಲ್ಲಾ ಗಳ್ಸಿಕಂಡಿದ್ದವೆ ಆದರೆ ಅವುಕೆ ಮನಶಾಂತಿ ಒಂದು ಇರ್ದುಲೆ. ಹೆಚ್ಚಿನ ಜನ ಸಂಸಾರ ತಾಪತ್ರಯ, ಆರೋಗ್ಯ ಸಮಸ್ಯೆ, ಆಸ್ತಿ ವ್ಯವಹಾರ ಹಿಂಗೆ ಕೊರಗ್‌ಲೇ ಜೀವನ ಕಳ್ದು ಬುಟ್ಟವೆ. ಆದರೆ ನಾವು ಏಕೆ ಈ ವರ್ತುಲದೊಳಗೆ ಇದ್ದ್ ನರಳೋಕುತಾ ಒಮ್ಮೆ ಯೋಚನೆ ಮಾಡಿ. ಇದರಿಂದ ಹೊರಗೆ ಬಂದ್ ಚೆಂದದ ವಿಶಾಲ ಪ್ರಪಂಚನ ನೋಡೋಕು. ನಮ್ಮ ಸುತ್ತುಮುತ್ತ ಇರೋ ಪರಿಸರ, ಶ್ರಮ ಹಾಕಿದಷ್ಟ್ ಹಸಿರನ್ನು ಉಣಿಸೋ ಭೂಮಿ ತಾಯಿ, ಸದಾ ಪ್ರೀತಿನೇ ತೋರ್ಸೋ ಸಾಕ್ ಪ್ರಾಣಿಗ, ಜೀವನನ ಮುಂದಕ್ಕೆ ಸಾಗುಸ್ತಿರೋ ಅಗೋಚರ ಶಕ್ತಿಯಾದ ಭಗವಂತ ಇವುಕೆ ನಾವ್ ಶರಣಾಗಿ ಬುಟ್ಟರೆ ಮುಂದಿನ ಜೀವನ ಅದ್ಭುತವಾಗಿದ್ದದೆ. ಡಾ.ಬಿ.ಎಂ.ಹೆಗ್ಡೆಯವು ಹೇಳ್ದಂಗೆ ನಾವು ಮರ ಗಿಡ, ಪ್ರಾಣಿ ಪಕ್ಷಿ, ಜಾತಿ ಕುಲ ನೋಡದೆ ಮನ್ಸರ್ನ ಪ್ರೀತ್ಸಿರೆ, ಮನ್ಸ್‌ಲಿ ದ್ವೇಷಕ್ಕೆ ಜಾಗನೇ ಕೊಡದಿದ್ದರೆ ಕಾಯಿಲೆ ಕಸಕ್ಕೆ ಜಾಗ ಇರದೆ ಆರೋಗ್ಯದಿಂದ ಇರಕ್. ಮನ್ಸ ತೇಳ್ದ ಮೇಲೆ ನೂರೆಂಟು ಚಿಂತೆಗ ಬಂದೆ ಬಂದದೆ. ಆಗ ದೇವಸ್ಥಾನಗ, ಪ್ರವಾಸ ತಾಣಗಳಿಗೆ ಹೋಗಿ ಮನ್ಸ್ ಹಗುರ ಮಾಡಿಕಣಕ್. ಕೆಲವು ಜನ ಹೇಳ್ದು ಕೇಳಿಒಳೆ ನೀವು ಗಣೇಶನ ಹಬ್ಬ, ವರಮಹಾಲಕ್ಷ್ಮಿ ಹಬ್ಬ ಮಾಡ್ದುಲೆನಾತ ಕೇಳ್‌ಕಾಕನ ಕಾಡ್‌ಕೋಳಿಗೆ ಎಂಥಾ ಸಂಕ್ರಾಂತಿ ಅಂತ ಹೇಳುವೆ. ಸಂಕಟ ಬಾಕನ ವೆಂಕಟರಮಣತಾ ಓಡೋ ಬದ್ಲ್ ಜೀವನಲಿ ಆಧ್ಯಾತ್ಮಕ್ಕೂ ಸ್ವಲ್ಪ ಜಾಗ ಕೊಟ್ಟರೆ ಒಳ್ಳೇದೇನೋತ ಅನ್ಸಿದೆ. ನಮಿಗೆ ಎಷ್ಟು ಉಟ್ಟೋ ಅಷ್ಟಕ್ಕೇ ತೃಪ್ತಿ ಕಾಂಬೋದು ಒಳ್ಳೇದು. ಬರೀ ಹಣ  ಆಸ್ತಿ ಮನ್ಸಂಗೆ ನೆಮ್ಮದಿ ಕೊಡ್ದುಲೆತೇಳ್ದುಕ್ಕೆ ಮೊನ್ನೆ ಸೋಷಿಯಲ್ ಮೀಡಿಯದಲ್ಲಿ ಓಡಾಡ್ತಿದ್ದ ಸುದ್ದಿನೇ ಸಾಕ್ಷಿ. ಮುಕೇಶ್ ಅಂಬಾನಿಯ ರಿಲಯನ್ಸ್ ಇಂಡಸ್ಟ್ರೀಸ್‌ನ ಉಪಾಧ್ಯಕ್ಷರಾಗಿದ್ದ ಪ್ರಕಾಶ್ ಷಾ ಜೈನ ಸನ್ಯಾಸತ್ವ ಸ್ವೀಕರ್ಸಿದ್ದೋ. ಅವುಕೆ ವರ್ಷಕ್ಕೆ 75 ಕೋಟಿ ಸಂಬಳ ಸಿಗ್ತಾ ಇದ್ದರೂ ಮನ್ಸ್‌ಗೆ ನೆಮ್ಮದಿ ಇತ್ಲೆ ಗಡ. ಈ ವಿಚಾರ ನಾವು ನೀವು ಯೋಚನೆ ಮಾಡುವಂಗೆ ಮಾಡುಟ್ಟಲ್ಲಾ?

---

**ಕವಿತಾ ಕಿರಣ್ ಜೈನೀರಾ**
ಬಾಳುಗೋಡು




# ಚಕ್ರ ಬಡ್ಡಿ

● ಲೀಲಾ ದಾಮೋದರ

ಹೊತ್ತು ಮಧ್ಯಾಹ್ನ ತಿರ್ಗಿರೂ ಸೀತಕ್ಕನ ಕೆಲ್ಸ ಮುಗ್ದಿತ್ತ್‌ಲೆ. ಬಾಳಾ ವಸ್ತುಗಳ ಜೋಡ್ಸಿಕಂಬಕೆ ಇತ್ತ್ ಅವ್ಕೆ. ಅಕ್ಕಿ, ಬೆಲ್ಲ, ಉಪ್ಪು, ಹುಣ್ಸುಳಿ, ಮೆಣ್‌ಸ್ ಹೀಂಗೆ ತಕ್ಷಣಕ್ಕೆ ಬೇಕಾದ ಸಾಮಾನ್‌ಗಳ ದೊಡ್ಡ ಸಣ್ಣ ಗಂಟ್‌ಗಳ ಕಟ್ಟಿ ಗೋಣಿಚೀಲಲಿ ತುಂಬುಸಿ ಇಸಿದೊ. ಒಣ್ಕೆ, ಕತ್ತಿ, ಮಣೆ, ಮಾಯ್ಪು, ಬಟ್ಟೆ ಗಂಟ್, ಪಾತ್ರ ಪರ್ಡಿಗಳ ಕೊಟೆಗೆನ ತಿಣೆಲಿ ಸಾಲ್ ಆಗಿ ಜೋಡ್ಸಿ ಇಸಿದೊ. ಹೊಸ ಮನೆಲಿ ಹೋಗಿ ವಾಸ ಮಾಡೊಕೊರೆ ಬೇಕಾವ ಸಾಮಾನ್ ಒಂದೋ ಎಡ್ರೋ?

ಬೊಳ್ಪಿಗೆ ಹೋಕನೇ ಶ್ರೀನಿವಾಸ ಹೇಳಿದ್ದೊ,

"ಕತ್ತಲೆ ಆಕೆ ಮುಂದೆ ಜಾಗೆನ ರಿಜಿಸ್ಟ್ರ ಮಾಡ್ಸಿ ಬಂದ್‌ಬುಟ್ಟವೆ. ನಾಳೇ ಆದಷ್ಟ್ ಬೇಗ ಹೊಸಮನೆಗೆ ಹೋಗಿ ಸೇರಿಕಮ್ಮೊನೊ. ದಿನ ಕೂಡಾ ಒಳ್ಳೆದುಟ್ಟು. ನೀ ಯಾವ ಯಾವ ಸಾಮಾನ್ ಬೇಕೋ ಅದರ ಎಲ್ಲ ಜೋಡ್ಸಿ ಗಂಟ್ ಕಟ್ಟಿ ಇಸ್. ಹೊತ್ತು ಹುಟ್ಟಿಕೆ ಮುಂದೆ ರಾಮಣ್ಣನ ಜೀಪು ತರ್ಸಿ ಹೊಗಿಬುಡೊನೊ."

ಸೀತಕ್ಕಂಗೆ ಹುರ್ಮ ಹುಟ್ಟಿತ್. ಯಾವ ದೇವ್ರು ಗಂಡಂಗೆ ಇಂತ ಒಳ್ಳೆ ಬುದ್ದಿ ಕೊಟ್ಟತೋ. ಯಾದೇ ಕೆಲ್ಸ ಹಿಡ್ದರೂ ಕಡೆ ಮುಟ್ಟುಸುವ ಜಾತಿ ಅಲ್ಲ ಅವರ ಗಂಡ. ಸೀತಕ್ಕಂಗೆ ಬಿಡಿಬಿಡ್ಚಿಲ್ ಹೋಗಿತ್ತ್. ಇನ್ನಾರ್ ತಮ್ಮ ಬೊದ್ಕು ಸರಿಹೋಗಲಿ ದೇವ್ರೇತ ಹಂಬುಲ್ಸಿಕಂಡ್ ಕೆಲ್ಸನಮಂದುವರ್ಸಿದೊ.

ಹೀಂಗೆ ಅದೃಷ್ಟ ಹುಡ್ಕಿಯಂಡ್ ಬಂದ್ ತನ್ನ ಭಾಗ್ಯದ ಬಾಗ್‌ಲ್ ತೆಗ್ದ್ ಬುಡ್ದುತ ಸೀತಕ್ಕ ಕನ್ಸ್ ಮನ್ಸ್‌ಲಿ ಕೂಡಾ ಗೇನ ಮಾಡ್ತ್‌ಲೆ. ನೆರ್ಮನೆ ಪುಟ್ಟಪ್ಪಣ ಅವರ ಮಗಳ ಮನೆಗೆ ಹೋಗಿ ಬಂದೊವು ಸೀತಕ್ಕನ ಕೆಬಿಗೆ ಒಂದು ಸುದ್ದಿ ಹಾಕಿದ್ದೊ,

"ಸೀತಾ, ನಮ್ಮ ಗಿರ್ಜನ ಮನೆ ಹಕ್ಕಲೆ ಒಂದು ಜಾಗೆ ಮಾರಿಕೆ ಉಟ್ಟು. ಜಾಗೆನ ಎಜ್ಮಾನಂಗೆ ದುಡ್ಡುನ ಮುಗ್ಗಟ್ಟ್ ಆಗಿ ಜಾಗೆ ಮಾರ್ದೆಗಡ.

ಆಸ್ತಿ ಮಾರಿ ಕೈಲಿ ಹಂಞ ದುಡ್ಡ್ ಮಾಡಿಕಂಡ್ ಪೇಟೆ ಕರೆಲಿ ಇರುವ ಅವಂದೇ ಇನ್ನೊಂದು ಜಾಗೆಗೆ ಹೋಗಿ ಅಂಗ್‌ಡಿ ಇಸಿದೆಗಡ. ಗಿರ್ಜನೇ ಸೀತತ್ತೆಗೆ ಹೇಳಿ ಅಪ್ಪಾತ ಹೇಳ್ತ್."ತ ಹೇಳಿದ್ದೊ.

ಸೀತಕ್ಕ ಬೇಜಾರ್‌ಲಿ ಹೇಳಿದ್ದೊ,

"ಜಾಗೆ ತೆಗಿದು ಸುಮ್ಮನೆ ಆದ್ದೆನೋ ಅಣ್ಣಾ? ನಮ್ಮ ಪಾಡ್ ನಿವ್ಗೆ ಗೊತ್ತೇ ಉಟ್ಟಲೆ?"

"ಅದ್ಕೇ ಹೇಳ್ದ್ ಸೀತಾ. ನಿನ್ನ ಮಂಜ ಗಿರಿ ಮನ್ಸ್ ಮಾಡ್ರೆ ಈ ಕೆಲ್ಸ ಆದು. ಐದ್ ಎಕರೆ ಜಾಗೆ ಉಟ್ಟು ಒಂದು ಎಕ್ರೆ ಅಡ್ಕೆ ತೋಟನೇ ಉಟ್ಟು. ಕೃಸಿ ಇಲ್ಲದೆ ಜಾಗೆ ಹಾಳ್ ಬಿದ್ದುಟು. ಬಂಗ ಬಂದ್ ಕೆಲ್ಸಮಾಡ್ರೆ ಊರ್ಜಿತ ಆದು. ಒಂದು ಸಾದಾರ್ಣದ ಹಂಚಿನಮನೆ ಉಟ್ಟು. ಹಲ್ಸಿನ ಮರ, ಮಾಯ್ನ ಮರ, ಚಾಳೆ, ಬಾಳೆತ ಎಲ್ಲ ಪಲವಸ್ತುಗಳೂ ಒಳೊ. ಆದರೆ ಯಾದೂ ಆರೈಕೆ ಮಾಡದೆ ಚೋಪಾರ್ ಆಕಂಡ್ ಉಟ್ಟು. ಹಾಂಗಾಗಿ ಹಞ್ಞ ಕಮ್ಮಿ ಕ್ರಯಕ್ಕೆ ಸಿಕ್ಕುದು ಬಲ. ನಿನ್ನ ಗಂಡಂಗೆ ಹೇಳ್ರೆ ಊರು ಉದ್ದಾರ ಮಾಡವರ ಹಾಂಗೆ ಯಾರ್‍ಯಾರಿಗೋ ಮಾಡಿ ಕೊಟ್ಟುಬುಡ್ದು. ಸೊಂತಕ್ಕೆ ಮಾಡಿಕಂಬ ಜಾತಿಯೇ ಅಲ್ಲ ಆಂವ. ಆಲೋಚನೆ ಮಾಡ್." ಹೇಳ್ದೊ ಪುಟ್ಟಪ್ಪಣ.

ಸೀತಕ್ಕ ಆಲೋಚನೆಗೆ ಬಿದ್ದೊ. ಅವು ಇಲ್ಲಿ ಬಾತಿರ್‍ವ ಬಂಗ ಏನ್ ಕಮ್ಮಿನೋ? ಇಪ್ಪೊತ್ತು ... ... ಅಲ್ಲ ಇಪ್ಪತ್ತೆರ್ಡ್ ವರ್ಸ ಆತ್ ಅವು ಮೊದುವೆ ಆಗಿ ಬಂದ್ ಈ ಮನೆನ ಎಜಮಾನ್ಕೆ ತಕಂಡ್. ಶ್ರೀನಿವಾಸ ಹೆಣ್ಣ್ ಕೇಳಿಕಂಡ್ ಹೋಕನ ಅವ್ಕೆ ಹದ್ನೇಳೊ ಹದ್ನೆಂಟೋ ವರ್ಸ. ಶ್ರೀನಿವಾಸ ಆಗ ಇಪ್ಪತ್ತೈದರ ಪೊರ್ಲಕಂಡೆ ಹೈದ. ಓದು ಬರ ಗೊತ್ತಿದ್ದಂವ. ಅವರ ಅವ್ವ ಅಪ್ಪ ಬಾರೀ ಸಂತೋಸುಂದಳೇ ಮಗಳ ಧಾರೆ ಎರ್ದ್ ಕೊಟ್ಟಿದ್ದೊ. ಅವೂ ಅಷ್ಟೆ ಬಾರೀ ಸಡ್ಗರಂದ ಗಂಡನ ಮನೆಗೆ ಬಂದಿದ್ದೊ. ಆದರೆ ಹಞ್ಞ ದಿನಲಿ ಅವರ ಸಡ್ಗರ ಎಲ್ಲ ಸೋರಿಹೋತ್. ಶ್ರೀನಿವಾಸ ವಿದ್ಯಾವಂತ. ಅವರ್ದ್ ಪೊರ್ಲುನ ಕೈಬರ. ಒಳ್ಳ ಮಾತ್‌ಗಾರ. ಯಾದೇ ಮೊದುವೆನ ಕರಾರ್, ರಾಜಿ ಪಂಚಾಯ್ತಿ, ಆಸ್ತಿನ ಪಾಲ್ ಪಟ್ಟಿ ಬರಿಯಕೆ ಶ್ರೀನಿವಾಸಂಗೆ ಹೇಳಿಕೆ ಹೋತಿತ್ತ್. ಕರಿಯಕನ ಹೋಗದೆ ಇರ್ದು ಹೇಂಗೆ? ಅದೂ ಅಲ್ಲದೆ ತಾನ್ ಸಮಾಜ ಸೇವೆ ಮಾಡಿಕಂಡ್ ಒಳೆತೇಳುವ ದೌಲು ಬೇರೆ. ಯಾರಾರ್ ಹೊಗುಳ್ರೆ ಹಿಂದೆ ಮುಂದೆ ನೋಡದೆ ಕರ್ಚ

ಮಾಡುವ ಸೊಬಾವ. ಹಾಂಗಾಗಿ ಹೆಣ್ಣ್, ಮಕ್ಕಳ ಕೇಳೊವೇ ಇಲ್ಲದಂಗೆ ಆತ್. ಕೃಷಿ ಕೆಲ್ಸ ಹಿಂದೆ ಬೀತ್. ಒಟ್ಟುಲಿ ಒಂದೋ ಉಪಾಸ ಇಲ್ಲರೆ ಅರೆಹೊಟ್ಟೆತೇಳ್ವಂಗೆ ಆತ್. ಅಂತ ಬಡ್ತನಲಿ ಕೂಡಾ ಮಕ್ಕಳ ಸಾಲೆಗೆ ಕಳ್ಸಿದ್ ಅವರ ಸಾಧನೆ ಆಗಿತ್ತ್. ಅದ್ಕಾಗಿ ತೌರುಂದ ತೊಟ್ಟ್ ಬಂದ ಒಡವೆ ಎಲ್ಲ ಒಂದೊಂದಾಗಿ ಕರ್ಗಿ ಹೋತ್. ಬುಗುಡಿ, ಕೊಪ್ಪು ಸರ್ಪುಳಿ, ವೊಂಕಿ, ಡಾಬು.. .. ಒಂದೇ ಮಗತೇಳಿ ಅಪ್ಪ ಎಷ್ಟೊಂದು ಚಿನ್ನ ಮಾಡ್ಸಿ ಹಾಕಿದ್ದೊ! ಈಗ ಅದೆಲ್ಲ ಕೈಬುಟ್ಟುಹೋಗಿ ಬೆಂಡ್, ತಾಳಿ ಸರ ಮತ್ತೆ ಮೂಕುಬೊಟ್ಟು ಮಾತರ ಒಳ್ದಿತ್ತ್. ಚಿನ್ನ ಹೋತುತೇಳಿ ಅವು ಚಿಂತೆ ಮಾಡ್ತ್‌ಲೆ. ಮಕ್ಕ ವಿದ್ಯಾವಂತರ್ ಆಕುತೇಳ್ದೇ ಅವರ ಆಸೆ ಆಗಿತ್ತ್. ಊರುನ ಜನ ಎಲ್ಲ ಸೀತಕ್ಕ ಗಟಿಗಿತಿ, ಗಂಡ ಊರೂರು ತಿರ್ಗಿರೂ ಮನೆ ಒಳ್ಸಿಬುಡ್ತ್‌ತ ತಾರೀಪು ಕೊಟ್ಟೊ.

ದೊಡ್ಡ ಮಙ್ಙ ಗಿರಿ ಕಲಿದರ್‍ಲಿ ಬಾರೀ ಬುದ್ದಿವಂತ ಆಗಿತ್ತ್. ಆದರೆ ಕಾಲೇಜ್‌ಗೆ ಹೋಕೊರೆ ದೂರದ ಪೇಟೆಗೆ ಹೋಕು. ಕರ್ಚಿ ಏನ್ ಸುಮ್ಮನೆ ಆದ್ದೆ? ಶ್ರೀನಿವಾಸಂಗೆ ಪಿಕ್‌ರಿನೇ ಇಲ್ಲೆ. ಸೀತಕ್ಕಂಗೆ ದಿಕ್ಕೇ ತೋಚದಾಂಗೆ ಆಕನ ರಂಗಪ್ಪ ಮಾಸ್ಟ್ರ ಶಿಕ್ಷಕ ತರಬೇತಿ ಮಾಡುವಾಂಗೆ ಸಲಹೆ ಕೊಟ್ಟೊ. ಹಾಂಗೆ ತರಬೇತಿನೂ ಮುಗ್ಸಿ ಈಗಷ್ಟೆ ಕೆಲ್ಸನೂ ಸಿಕ್ಕಿಟು. ಈ ಸಮೆಲೇ ಪುಟ್ಟಪ್ಪಣ ಆಸ್ತಿ ಬಗ್ಗೆ ಹೇಳ್ದ್.

“ಅಣ್ಣಾ, ಇವರ ಹೇಂಗಾರ್ ಹೆಡ್ಡ್ ಮಾಡಿ ಜಾಗೆ ನೋಡಿಕೆ ಕರ್ಕಂಡ್ ಹೋಗಿ. ಗಿರಿ ದೇವ್ರ ದಯಂದ ಕೆಲ್ಸಕ್ಕೆ ಸೇರಿಟು. ಹಣ ಹೇಂಗಾರ್ ಜೋಡ್ಸಿರೆ ಆತ್. ಒಮ್ಮೆ ಅಷ್ಟ್ ಮಾಡಿ ಅಣ್ಣ.”

ಪುಟ್ಟಪ್ಪಣನೊಟ್ಟಿಗೆ ಹೋಗಿ ಜಾಗೆ ನೋಡಿ, ಕಮಲು ಮನೆಲಿ ಗದ್ದಳ ಉಂಡ್ ಬಂದ ಶ್ರೀನಿವಾಸ ಬಾರೀ ಉಮೇದ್‌ಲಿ ಇದ್ದೊ. ದೊಡ್ಡ ಮನ್ಸ್ ಮಾಡಿ ಅಲ್ಲಿ ಇಲ್ಲಿ ಓಡಿಯಾಡಿ ಅವರ್‌ಂದ ಆದಷ್ಟ್ ಹಣ ಹೊಂದ್‌ಸಿದ್ದೊ. ಒಳ್ದದರ ಗಿರಿ ಒಟ್ಟು ಮಾಡಿತ್ತ್. ಎಲ್ಲಿ ಗಂಡ ಮನ್ಸ್ ಬದ್‌ಲ್ಸಿ ದುಡ್ಡುನ ಕರ್ಚಿ ಮಾಡಿ ತನ್ನ ಆಸೆನ ನಿರಾಸೆ ಮಾಡಿಬುಟ್ಟವೆನೋತ ಹೆದರ್‌ದಕ್ಕೇ ಲೆಕ್ಕ ಇಲ್ಲೆ. ದೇವ್ರ ದಯೆ. ಹಾಂಗೆ ಆತ್ಲೆ. ಇಂದ್ ಬೊಳ್ಪಿಗೆ ಶ್ರೀನಿವಾಸನ ಮಾವ ಕೃಷ್ಣಪ್ಪ, ಸಣಪ ಭರತನ ಕರ್ಕಂಡ್ ಪೇಟೆಗೆ ಹೋಗೊಳೊ. ಇನ್ನ್ ಏನ್, ಹಿಂಬೊತ್ತು ಆಕೆ ಮುಂದೆ ಬಾವೊ.

ನಾಯಿಗ ಒಂದೇ ಸಮನೆ ಬೊಗ್‌ಳಿಕೆ ಸುರುಮಾಡ್ಕನ ಸೀತಕ್ಕ ಕುತಿಗೆ

ನೇಚಿ ದಾರಿಕಡೆ ನೋಡ್ದೊ. ಕಾನದ ಮೀನಾಕ್ಷಿ ಬಂದ್‌ಕಂಡ್ ಉಟ್ಟು ಕೈಲಿ ಏನೋ ತೂಕದ ಗಂಟ್ ಹಿಡ್ಕಂಡ್.

"ಬೊಗಳ್ದ್ ಸಾಕ್.. .. ದಾಸ, ಬೊಳ್ಳು ಸುಮ್ಮನಿರಿ" ನಾಯಿಗಳಿಗೆ ಬಾಯಿ ಮಾಡಿ, "ಬಾ ಮೀನಾಕ್ಷಿ.. .."ತ ಹೇಳಿ ಜೋಸ್ತಿನ ಕುಸಿಂದ ಸ್ವಾಗತ ಮಾಡ್ದೊ. ಕಾನದ ಸೇನ್‌ಬೋಗನವರ ಹೆಣ್ಣ್ ಮೀನಾಕ್ಷಿ. ಸೀತಕ್ಕನ ಅನು ಆಪತ್ತ್‌ಗೆ ಆದೊವು ಅವು. ಸೀತಕ್ಕನೊವು ಬೇರೆ ಜಾಗೆಗೆ ಹೋದುಗೊತ್ತಾಗಿ ಮಾತಾಡ್ಸಿಕಂಡ್ ಹೋಕೆ ಬಂದಿದ್ದೊ ಬರ್ಣಿ ಬರ್ತಿ ಉಪ್ಪಿನ ಕಾಯಿ ತಕಂಡ್.

"ಮೀನಾಕ್ಷಿ.. .. ನಿನ್ನ ಉಪಕಾರನ ಹೇಂಗೆ ತೀರ್ಸಲಿ?"ತೇಳಿ ಸೀತಕ್ಕ ಕಣ್ಣ್‌ಲಿ ನೀರ್ ತಂದ್‌ಕಂಡೊ.

"ಉಪಕಾರ ತೀರ್ಸುದಾದರೆ ನಮ್ಮ ಗೆಳೆತನಕೆ ಬೆಲೆ ಎಲ್ಲಿ ಉಟ್ಟು ಸೀತಾ? ನನ್ನ ಜೀವ ಒಳ್ಸಿದ ನಿನ್ನ ಋಣನ ನಂಗೆ ತೀರ್ಸಿಕೆ ಆದೋ?" ಹಿಂದೆನ ನೆನ್ಪುಂದಳೂ ಜೀವದ ಜೋಸ್ತಿ ದೂರ ಆದ್ದೆತೇಳುವ ಬೇನೆಂದೊಳೂ ಮೀನಾಕ್ಷಿನ ಕಣ್ಣ್ಂದಳೂ ದಳದಳತ ನೀರ್ ಇಳ್ತ್.

ಆಗ ಮೀನಾಕ್ಷಿ ಚೊಚ್ಚಲ ಬಸಿರಿ! ಹೊಟ್ಟೆಬೇನೆ ಬಂದುಟು!! ಮಳ್ಗಾಲ!! ಹಳ್ಳ- ಚೋಡಿ ಎಲ್ಲ ತುಂಬಿ ಹರ್ದ್ ಪೇಟೆನ ದಾರಿನ್ನೇ ತುಂಡು ಮಾಡಿ ಹಾಕಿದ್ದೊ. ಇತ್ತ ಡಾಕ್ಟ್ರ ಕರ್ಕಂಡ್ ಬಾವಾಂಗೂ ಇಲ್ಲೆ ಆತ್ತ ಮೀನಾಕ್ಷಿನ ಆಸ್‌ಪತ್ರೆಗೆ ಕರ್ಕಂಡ್ ಹೋವಾಂಗೂ ಇಲ್ಲೆ.ಆಗ ಸೀತಕ್ಕ ಅವ್ಕೆ ಗೊತ್ತಿದ್ದ ಅಲ್ಪಸೊಲ್ಪ ಹೆರ್ಗೆ ಮಾಡ್ಸುವ ತಿಳವಳ್ಕೆಂದ ಹೆರ್ಗೆ ಮಾಡ್ಸಿದ್ದೊ. ಮನೆವ್ಕೆಲ್ಲ ಹೋದ ಜೀವ ಬಂದಂಗಾಗಿತ್ತ್. ಅಂದ್‌ಂದ ಅವು ಇಬ್ಬೊರೂ ಜೀವದ ಜೋಸ್ತಿಗ ಆಗಿದ್ದೊ.

ಮುಂದೆ ಸೀತಕ್ಕನ ಕಷ್ಟಸುಕಗಳ್ಲಿ ಮೀನಾಕ್ಷಿ ಯಾಗೋಳೂ ಒಟ್ಟಿಗಿರ್ತಿತ್ತ್. ಪಿಟ್ಟಾಸಿ ಗಂಡನ ಕಾಡಿ ಬೇಡಿ ಸೀತಕ್ಕಂಗೆ ದುಡ್ಡುನ ಸಾಯ ಮಾಡ್ತಿತ್ತ್. ದೊಡ್ಡ ಮಜ್ಜ ಗಿರಿ ಮನೆಂದಳೇ ಆರ್ ಮೈಲ್ ದೂರದ ಸಾಲೆಗೆ ಓಡಿಯಾಡಿ ಹೈಸ್ಕೂಲು ಓದುಮುಗ್ಸಿತ್. ಆದರೆ ಮಾಷ್ಟ್ರ ತರಬೇತಿ ದೂರದ ಪೇಟೆಲಿ ಆಕಾಗಿತ್ತ್. ಆಗೆಲ್ಲ ಸೀತಕ್ಕಂಗೆ ಹಣದ ಮುಗ್ಗಟ್ಟ್ ಆತಿತ್ತ್. ಮಜ್ಜನ ಓದುಗೆ ಹೆಣ್ಣ್ ಹೇಂಗೆ ದುಡ್ಡು ಹೊಂದ್‌ಸಿದೆ, ಕರ್ಚಿನ ಹೇಂಗೆ ನಿಬಾಯ್ಸಿದೆತೇಳ್ವ ಗೊಡವೇ ಇಲ್ಲದಷ್ಟ್ ಶ್ರೀನಿವಾಸನ ಸಮಾಜಸೇವೆ ನಡಿಯತಿತ್ತ್. ಮಜ್ಜನ ಓದ್ಸಿಕೆ ದುಡ್ಡು ಬೇಕು, ಕರ್ಚಿ

ಹಣ್ಣ್ ಕಮ್ಮಿ ಮಾಡೊಕುತ ಸೀತಕ್ಕ ಗಂಡನೊಟ್ಟಿಗೆ ಕೇಳಿಕಂಬಕನ ಗಂಡ ಇಪರೀತ ಸಿಟ್ಟ್ ಬಂದ್, "ಇಂದ ನಂಗೆ ಹದ ಹೇಳಿಕೆ ಬರ್ಬಡ. ಗಿರಿ ಇನ್ನ್ ಸಾಲೆಗೇ ಹೋದು ಬೇಡ"ತ ಮಜ್ಜನ ಓದಟನ್ನೇ ನಿಲ್ಸುವಾಂಗೆ ತೊಘ್ಲಕ್ ಆಜ್ಞೆ ಹೊರ್ಡಸಿದ್ದೊ. ಪುಣ್ಯಕ್ಕೆ ಆ ಆಜ್ಞೆನ ಜಾರಿಗೆ ತಾವ ಜಾಣತನ ಆಗಲೀ ಪುರ್ಸೊತ್ತ್ ಆಗಲೀ ಶ್ರೀನಿವಾಸಂಗೆ ಇತ್ತ್‌ಲೆ. ಹಾಂಗಾಗಿ ಗಿರಿ ಶಿಕ್ಷಕ ತರಬೇತಿ ಮುಗ್ಸಿಬುಡ್ತ್. ಗಂಡಂಗೆ ಹೇಳ್ದು ಒಂದೇ ಕಲ್ಲ್‌ಬಂಡೆಗೆ ಹೇಳ್ದು ಒಂದೇತ ತಿಳ್ಕಂಡ ಸೀತಕ್ಕ ತನ್ನನ್ನ್ ತಾನ್ ಸಮ್ದಾನ ಮಾಡಿಕಂಡ್ ಮಕ್ಕಳಿಗೆ ಆಧಾರ ಆಗಿದ್ದೊ.

ಅಡ್ಕೆ ಬೆಳೆನ ಕಾಲಲಿ ಆಳೆತ್ತರದ ಅಡ್ಕೆ ರಾಸಿ ಅಂಗಳಲಿ ಬಿದ್ದರೂ ಅದರ್‌ಂದ ಒಂದು ಕಾಸೂ ಮನೆ ಕರ್ಚಿಗೆ ಸಿಕ್ಕ್ ತಿತ್ತ್‌ಲೆ. ಶ್ರೀನಿವಾಸನ ಕೃಷ್ಣಪ್ಪ ಮಾವ ಅನುಕೂಲಸ್ತ ಕುಳ; ಅವರ ಹಕ್ಕಲೇ ಶ್ರೀನಿವಾಸಂಗೆ ಹೆಚ್ಚಿನ ಸಾಲ ಇದ್ದದ್. ಅಡ್ಕೆ ಕೊಯ್ಲಿನ ಸಮೆಗೆ ಸರಿ ಆಗಿ ಆಳ್‌ಗಳ ಕೂಡ್ಸಿಕಂಡ್ ಗೋಣಿಚೀಲದೊಟ್ಟಿಗೆ ಬಂದ್ ಬುಡ್ತಿದ್ದೊ. ಹೊಂಬಣ್ಣಲಿ ಹೊಳಿವ ಉರಂಟುರುಂಟು ಅಡ್ಕೆನ ಲೆಕ್ಕ ಮಾಡಿ ಮಾಡಿ ಗೋಣಿಗೆ ತುಂಬುಸುತಿದ್ದೊ. ವೊರ್ಸ ವೊರ್ಸನೂ ಅಡ್ಕೆ ಬೋಡ್ಡಿಗೆ ಸಂದಾಯ ಆತಿತ್ತೇ ಹೊರ್ತು ಅಸ್‌ಲ್‌ನ ಒಂದು ಬಾಗ ಕೂಡಾ ಕಮ್ಮಿ ಆತಿತ್ತ್‌ಲೆ. ಸಣ್ಣ ಗುಡ್ಡೆನಾಂಗಿರುವ ಅಡ್ಕೆ ರಾಸಿನ ಎದೆ ಉಬ್ಬುಸಿ ಶ್ರೀನಿವಾಸ ಸಾಲಕ್ಕೆ ಸಂದಾಯ ಮಾಡ್‌ಕನ ಸೀತಕ್ಕನ ಎದೆ ಹಿಂಡಿದಾಂಗಾಗಿ ಕಣ್ಣ್‌ಗಳ್ಲಿ ಬೇನೆ ಮನೆ ಮಾಡ್ತಿತ್ತ್. ಹಾಂಗಾಗಿ ಮೀನಾಕ್ಷಿಂದ ಸಾಯ ಪಡಿಯದೆ ಬೇರೆ ದಾರಿ ಇತ್ತ್‌ಲೆ ಅವ್ಕೆ. ಒಳ್ಳೆಮೆಣ್ಸೋ, ಗೇರ್ದ ಬೀಜನೋ, ಗೆಳ್ಸೋ ಏನಾರ ಮಾರಿ ಸೀತಕ್ಕ ಸಾಲ ತೀರ್ಸ್‌ತಿದ್ದೊ. ಮೀನಾಕ್ಷಿನ ಗಂಡನೂ ಹಣಕ್ಕೆ ಮೋಸ ಇಲ್ಲೆತ ಗೊತ್ತಾದ ಮೇಲೆ ಹೆಚ್ಚಿ ತಕರಾರ್ ಮಾಡದೆ ದುಡ್ಡು ಕೊಡ್ತಿದ್ದೊ. ಅದೂ ಅಲ್ಲದೆ ಹೆಣ್ಣ್‌ನ ಜೀವ ಒಳ್ಸಿದ ಸೀತಕ್ಕನ ಮೇಲೆ ಅವ್‌ಕೆ ಗೌರವನೂ ಇತ್ತ್.

ಅದೂ ಇದೂ ಮಾತಾಡಿಕಂಡ್ ಹೊತ್ತ್ ಹೋದ್ದೇ ಗೊತ್ತಾತ್ಲೆ. "ಇನ್ನ್ ಕತ್ತಲೆ ಆದೆ ಸೀತಾ. ನಾ ಬನ್ನೆ ಅಗದಾ?" ಮೀನಾಕ್ಷಿ ಮೇಲೆ ಎದ್ದತ್. ಗೆಳ್ತಿನ ಜಾಲ್ ಕರೆಗೆ ಮುಟ್ಟ ಕಳ್ಸಿ ಬಂದ ಸೀತಕ್ಕ ಹಟ್ಟಿಕಡೆ ತಿರ್ಗಿದೊ. ಮೇದ್ ಬಂದ ದನಗಳ ಹಟ್ಟಿಗೆ ಕೂಡಿ ಉದ್ಗಿಲು ಎಳ್ದೊ. ಮರ್ಗಿಲ್ ತುಂಬ ನೀರ್‌ನ್ನೂ ತುಂಬುಸಿ ಇಸಿದೊ.

ಸೀತಕ್ಕ ಕಷ್ಟಕ್ಕೆ ಯಾಗೊಳೂ ಹೆದ್ರ್‌ತ್ಲೆ. ಆದರೆ ಗಂಡ ಮಾಡ್ದ ಸಾಲ ಮಿತಿ ಮೀರಿ ಆಸ್ತಿ ಕೈ ತಪ್ಪಿ ಹೋವ ಹಂತಕ್ಕೆ ಬಾಕನ ಕಂಗಾಲಾಗಿಬುಟ್ಟೊ. ಅವರ ಇಷ್ಟ್ ವೊರ್ಸದ ಗೆಯ್ಮೆ ಹಾಳಾಗಿ ಹೋದರ ಕಾಂಬಕನ ನಿತ್ತ ನೆಲನೇ ಜೆರ್ದ್ ಹೋದ ಹಾಂಗೆ ಆತ್. ಮಜ್ಜ ಗಿರಿ ಇನ್ನೂ ಹತ್ತನೇ ಕ್ಲಾಸ್. ಸಣ್ಣ ಕ್ಲಾಸ್‌ಗಳ್ಲಿ ಕಲಿವ ರಾಧಾ, ಗಣೇಶ, ಪೂರ್ಣಿಮ. ಸುತ್ತು ಕತ್ತಲೆ, ದಿಕ್ಕೇ ತೋಚದಂತ ಪರಿಸ್ಥಿತಿ. ಮೊದುವೆ ಆದ ಹೊಸ್ತುಲಿ ಅಣ್ಣಂದರ್ ಆಗಾಗ ಬಂದ್ ಬೆನ್ನ್‌ಗೆ ನಿಲ್ಲ್‌ತಿದ್ದೊ. ಮತ್ತೆ ಮತ್ತೆ ಅವ್ಕೂ ಮೊದುವೆ ಮಕ್ಕತ್ತೆಲ್ಲ ಆಗಿ ಅವರವರ ತಾಪತ್ರಯಲೇ ಕಂತಿ ಹೋಕನ ಸೀತಕ್ಕ ತಬ್ಬುಲಿನಂಗೆ ಆಗಿದ್ದೊ. ಮೀನಾಕ್ಷಿನ ಉಪಕಾರಂದ ಗಿರಿ ತರಬೇತಿ ಮುಗ್ಸಿ ಕೆಲ್ಸ ಹಿಡಿಯಕನ ಮಿಣ್‌ಕಿಯಂಡ್ ಇದ್ದ ದೀಪಕ್ಕೆ ಜೀವ ಬಂದಂಗೆ ಆಗಿತ್ತ್. ಆಸ್ತಿ ಹೋದರೂ ಮಕ್ಕಳ ಹೊಟ್ಟೆಗಿಷ್ಟ್ ಗಂಜಿ ಕಾಣ್‌ಸಕ್ ತೇಳುವ ಧೈರ್ಯ ಮೂಡ್ತ್. ಆಷ್ಟ್ ಆದರೆ ಸಾಕಾ? ಸಣ್ಣ ಮಕ್ಕಳ ಓದುಸುಬಡ? ಬೆಳ್‌ಕಂಡ್ ಇರುವ ರಾಧೆಗೆ ಮೊದುವೆ ಮಾಡ್ಬಡ? ಗಿರಿನ ಎಳ್ತ್ ಹೆಗ್‌ಲ್‌ಗೆ ಎಷ್ಟ್ ಬಾರ ಹಾಕುದು? ಈ ಹೊಸ ಜಾಗೆ ಒಂದು ಸಿಕ್ಕಿಬುಟ್ಟರೆ ಮಾನ ಒಳ್ದದೆ. ಅಷ್ಡ್ ಮಾಡ್ ದೇವ್ರೇತ ಬೇಡಿಕಂಡ್ ಒಳ್ದ ಕೆಲ್ಸನ ಮುಂದುವರ್ಸಿದೊ.

ಹೊಸ ಜಾಗೆಂದ ಗಿರಿನ ಸಾಲೆಗೆ ಹಕ್ಕಲೆ ಆದ್ದೆ. ಈ ವೊರ್ಸದ ಪರೀಕ್ಷೆ ಮುಗ್ದ ಕೂಡ್‌ಲೇ ಮಕ್ಕಳ ಅಲ್ಲಿಗೇ ಕರ್‍ಸಿಕಣೊಕು. ಸಾಲೆಗೂ ಹಕ್ಕಲೆ ಆದ್ದೆ. ಗಂಡ ಹಳೆ ಜಾಗೆಗೂ ಹೋಸ ಜಾಗೆಗೂ ಓಡ್ಯಾಡಿಕಂಡ್ ಇದ್ದವೆ. ಮುಂದೆನ ಜೀವನನ ಕಲ್ಪುಸಿಕಂಡ್, ಕುಸಿಪಟ್ಟ್‌ಕಂಡ್ ಆಗಾಗ ತಲೆ ನೇಚಿ ದಾರಿಕಡೆ ನೋಡಿಕಂಡ್ ಪೇಟೆಗೆ ಹೋದೊವು ಯಾಗ ಬಂದವೆ, ಯಾಗ ಒಳ್ಳೆ ಸುದ್ದಿನ ಕೇಳ್ನೆತ ಕಾದ್‌ಕಂಡ್ ಇದ್ದೊ.

ಬೌಬೌತ ಬೊಗ್ಳಿಕೆ ಸುರುಮಾಡ್ದ ನಾಯಿಗ ಒಮ್ಮೆಗೆ ದೆನಿ ಕುಗ್ಗ್‌ಸಿ ಕುಂಯಿ ಕುಂಯಿತೇಳಿಕೆ ಸುರು ಮಾಡ್ದೊ. ಓ! ಬಂದ್ ಬುಟ್ಟೊ. ಸಂತೋಸುಲಿ ಅವರ ಎದೆ ಹೋಡ್ಕಂಬಕೆ ಸುರು ಮಾಡ್ತ್. ಬೇಗ ಬೇಗ ಒಳೆಗೆ ಹೋಗಿ ನಿಂಬುಳಿ ಪಾನ್ಕ ಮಾಡಿ ತಂದ್ ಕೊಟ್ಟ್ ಕೇಳ್ದೊ.

"ಹೋದ ಕೆಲ್ಸ ಆತಲ್ಲ?"

ಶ್ರೀನಿವಾಸ ಮಾತಾಡದೆ ಕುಡ್ತ ತೆಗ್ದ್ ಕೊಕ್ಕೆಗೆ ಕೋಸಿದೊ.

ಬೈರಾಸ್‌ಲಿ ಮೋರೆನ ಬೆಗ್‌ರ್ ಒರ್ಸಿಕಂಡ್ ಕೃಷ್ಣಪ್ಪ ಮಾವ ಹೇಳ್ದೊ,

“ಆ ಜಾಗೆನ ರಿಕಾರ್ಡ್ ಸರಿ ಇಲ್ಲೆ ಸೀತಾ. ಅಂತ ಜಾಗೆನ ತಕಂಡ್ ಮತ್ತೆ ಅದ್ ಸೋದೀನಕ್ಕೆ ಬಾರದಿದ್ದರೆ ದುಡ್ಡು ನೀರಿಗೆ ಹಾಕಿದಾಂಗೆ ಅಲ್ಲ? ಅದ್ಕೆ ಹಾಂಗೆ ಬಂದ್ ಬುಟ್ಟೊ.”

ನಿರಾಸೆನ ಹೊಡ್ತ ತಡ್ಕಂಬಕಾಗದೆ ಕುಡ್ದ್ ಇಸಿದ ಲೋಟಗಳ ತಕಂಡ್ ಒಳೆಗೆ ಹೋದೊ.

ಒಂದು ಕ್ಷಣ ಸೀತಕ್ಕನ ಪಾಲ್‌ಗೆ ನಿತ್ತ್ ಹೋದ ಕಾಲ ಮೆಲ್ಲನೆ ನಡಿಯಕೆ ಸುರು ಮಾಡ್ತ್.

“ಅವ್ವಾ. ನಾವು ತೆಗಿಯೊಕುತ ಇದ್ದ ಜಾಗೆನ ಕೃಷ್ಣಪ್ಪ ಅಜ್ಜ ಅವರ ಹೆಸ್ರ್‌ಗೆ ಮಾಡಿಕಂಡೊಗಡ.ದಾರಿಲಿ ಸಿಕ್ಕಿ ಹೇಳ್ದೊ, ‘ನಾ ಆದರೆ ಕೋರ್ಟುಕಚೇರಿತ ಸುತ್ತುಂವೆ. ನೀ ಇನ್ನೂ ಸಣ್ಣ ಹೈದ. ನಿನ್ನ ಅಪ್ಪನ ನಂಬಿಕಂಡರೆ ಏನೂ ಆಕಿಲೆ. ನಿನ್ನ ಅವ್ವಂಗೆ ಎಂತ ಮಾಡಿಕೆ ಆದು? ಪಾಪ.. .. ಹೆಣ್ಣ್ ಹೆಂಗ್‌ಸ್’. ಎಂತ ವಿಸ್ವಾಸಗಾತ್‌ಂಜ ಅವು, ಅಲ್ಲ ಅವ್ವ?”

ಮಜ್ಜನ ಮಾತ್ ಕೇಳಿಕಂಡ್ ಇದ್ದ ಹಾಂಗೆ ಸೀತಕ್ಕನ ಕಣ್ಣ್‌ಗ ತುಂಬಿಕಂಡೊ. ಕೂಡ್ಲೇ ಯಾದೋ ಆಲೋಚನೆಂದ ಅವರ ಮೋರೆ ಗಡ್ಸ್ ಆತ್. ಹರಿಯಕಾದ ಕಣ್ಣ್‌ನ ನೀರ್ ಅಲ್ಲಿಯೇ ಇಂಗಿತ್.

ಇದ್ ಆದ ಒಂದು ವಾರಕ್ಕೆ ಅಡ್ಕೆ ಕೊಯ್ಲ್‌ಗೆ ಬಾತ್. ನೊಡುನ ಕೊಯ್ಲ್ ಆದ್ದರ್‌ಂದ ದೊಡ್ಡ ರಾಸಿನೇ ಬಿದ್ದಿತ್ತ್. ಗೋಣಿ ಹಿಡ್ಕಂಡ್ ನಾಲ್ಕ್ ಜನ ಆಳ್‌ಗಳೂ ಬಂದೊ. ಹಣ್ಣ್ ಹೊತ್ತ್‌ಲಿ ಬೆಳ್ಳಿ ಕಟ್ಟ್‌ನ ಬೆತ್ತನೂ ಹಿಡ್ಕಂಡ್ ಕೃಷ್ಣಪ್ಪ ಮಾವನೂ ಬಂದೊ.

ಎಲಾಡ್ಕೆ ತಿಂದ್‌ಕಂಡ್ ಇದ್ದ ಶ್ರೀನಿವಾಸ ಅಂಗಳದ ಕರೆಗೆ ಹೋಗಿ ಮಡೆ ಉಗ್ದ್, “ಬನ್ನಿ ಮಾವ”ತ ಸೋಗತ ಕೋರ್ದೊ. ಎಲಾಡ್ಕೆ ಹರಿವಾಣನ ಮಾವನ ಮುಂದೆ ದೂಡ್ದೊ. ಇಬ್ಬೊರೂ ವೀಳ್ಯ ತಿಂದ್‌ಕಂಡ್ ಆಳ್‌ಗಳಿಗೆ ಅಡ್ಕೆನ ಗೋಣಿಗೆ ತುಂಬುಸಿಕೆ ಹೇಳಿ ಸುಕ ದುಕ್ಕ ಮಾತಾಡಿಕೆ ಸುರು ಮಾಡ್ದೊ.

“ದೊಡಪಾ ಅಡ್ಕೆ ಮುಟ್ಟ್‌ಬಡಿ.” ಸೀತಕ್ಕ ಒಳೆಗೆಂದ ಬಂದ್ ಅಬ್ಬರ್ಸಿದೊ.

“ಏ.. .. ಎಂತದ್‌ಣೀ ಹೇಳ್‌ಡು.. “ಕವಳದ ರಸ ಬಾಯಿಂದ ಅರ್‌ದ್ ಹೋಗದಾಂಗೆ ತುಟಿನ ಅರ್ಲ್‌ಸಿ ಶ್ರೀನಿವಾಸ ಹೇಳ್ದೊ. ಅವರ

ಮಾತ್‌ಗೆ ಗಮನೇ ಕೊಡದೆ ಸೀತಕ್ಕ ಗಟ್ಟಿ ಸೊರಲಿ ಹೇಳ್ದೊ,

"ದೊಡಪಾ ನೀವು ಬಡ್ಡಿ, ಚಕ್ರಬಡ್ಡಿತೇಳಿ ಅಡ್ಕೆ ಪಸ್‌ಲ್‌ನ ಇಷ್ಟ್ ವೊರ್ಸ ಕೊಳ್ಳೆ ಹೊಡ್ದರಿ. ನನ್ನ ಮಕ್ಕ ಉಪಾಸ ಬೀಳುವಾಂಗೆ ಮಾಡ್ದರಿ. ಇಲ್ಲಿ ಕೇಳಿ, ಇನ್ನ್ ಮುಂದೆ ನೀವು ಸಾಲದ ವೊಸೂಲ್‌ಗಾಗಿ ನಮ್ಮ ಮನೆಗೆ ಬರ್ಬಡಿ.

ಪ್ರತಿ ವೊರ್ಸ ಅಡ್ಕೆನ ನೀವೇ ತಕಂಡ್ ಹೋದರೂ ನಿಮ್ಮ ಸಾಲ ಮುಗಿದೇಲೆ. ಎಷ್ಟ್ ಅಸಲೋ ಎಷ್ಟ್ ಬಡ್ಡಿಯೋ ನಾವ್ಗೆ ಒಂದೂ ಗೊತ್ತ್‌ಲೆ. ಆದರೂ ಹೇಳ್ನೆ, ನಿಮ್ಮ ಅಸ್‌ಲ್ ಹಣನ ವೊರ್ಸಕ್ಕೆ ಇಂತಿಷ್ಟ್‌ತ ನನ್ನ ಮಜ್ಜ ತೀರ್ಸಿದೆ. ಅದರ ಮೇಲೆ ಇನ್ನೇನಾರ್ ತಕರಾರ ತೆಗ್ದರಿಯೋ ನಾ ಬರೀ ಸೀತೆ ಆಗಿಒಳಿಯಕಿಲೆ, ನೆನ್‌ಪು ಯರ್ಲಿ!"

ಗೋಣಿ ಚೀಲ ಹಿಡ್ದ್ ಬೊಂಬೆಗಳಾಂಗೆ ನಿತ್ತ ಆಳ್‌ಗಳ ಕಡೆಗೆ ತಿರ್ಗಿ ಗುಡ್ಗಿದೊ,

"ಹ್ನೂ.. .. ಹೊರ್ಡಿ ಇಲ್ಲಿಂದ"

ಆಳ್‌ಗ ಗೋಣಿ ಚೀಲ ಹೆಗ್‌ಲ್‌ಗೆ ಹಾಕಂಡ್ ಹಜ್ಜ ತೆಗ್ದೊ.

ಕೃಷ್ಣಪ್ಪನೊವೂ ಮೆಲ್ಲನೆ ಮೆಟ್ಟ್ ಇಳ್ದೊ.

---

**ಲೀಲಾ ದಾಮೋದರ**
ಧಾತ್ರಿ, ವಲಯ ಅರಣ್ಯ ಕಚೇರಿ ಹತ್ತಿರ
ಗಾಂಧಿನಗರ, ಸುಳ್ಯ – 574239
9449451051

# ಮೌನವೃತ

● ಶರಣ್ಯ ಕೋಲ್ಚಾರ್ ಮತ್ತೆ ಪಟ್ಟಡ ದೀಕ್ಷಿತ್

ಹಿಂಬೊತ್ತಾಕನ ಒಮ್ಮಿಂದೊಮ್ಮೆಲೆ ನೆಲ ಕಾಣದಾಂಗೆ ಸುರೆವ ಬಿರ್ಸ್‌ನ ಮಳೆ ಜೋರಾಗೆ ಬಾತ್. ಎಲ್ಲಿ ನೋಡಿರೂ ನೀರು ತುಂಬಿ ಭೋರಾಂತ ಸದ್ದು ಮಾಡಿಕಂಡ್ ಸಿಕ್ಕಿ ಸಿಕ್ಕಿದಲ್ಲಿ ಹರ್ಕೊಂಡಿತ್. ಡಾಮರ್ ರೋಡ್‌ಗೆ ಬಿಳ್ವ ಮಳೆ ನೀರ್ ಚೆಲ್ಲಿ ರಟ್ಟಿಕಂಡಿತ್. ಜನ ಪೂರಾ ಅಲ್ಲಲ್ಲೆ ಗಾಡಿ ನಿಲ್ಸಿ ಅಂಗಡಿ, ಬಸ್ಟಾಂಡ್‌ಂತಾ ಪೂರಾ ಸೇರಿಕೊಂಡು ಗುಂಪುಗೂಡಿದ್ದಾ. ಮಳೆಗೆ ಎಲ್ಲಿಂದಲೋ ಓಡಿಬಂದ್ ಬಸ್ಟಾಂಡ್ಲಿ ನೀರಿಳಿಸಿಕಂಡ್ ಕುದ್ದಿದ್ದ ನಾಯಿನ ಮಳೆಗೆ ಬಂದ್ ಗುಂಪು ಸೇರ್ದ ಜನಗ ಪೂರಾ ಬೆದರ್ಸಿ ಹೊರಗೆ ಮಳೆಗೆ ಬೆರ್ಸಿದೊ. ಅದ್ ಪಾಪ ತುಂಬು ಗರ್ಭಿಣಿ ಹೊರಗೆ ಹೋಗದಿದ್ದರೆ ಜನಗ ನಂಗೆ ಮೆಟ್ಟಿವೆ ಇಲ್ಲರೆ ಸಿಕ್ಕಿದರ್ಲೀ ಬೊಡೆವು. ಹೊಟ್ಟೆಲಿ ಬೇರೆ ಮರಿಗ ಒಳ... ಬದ್ಕಿರೆ ತುಕ್ಕಿಕೊಂಡಾರ್ ತಿಂಬೆ ಅಂತ ಮಳೆಲೆ ಓಡಿಕೆ ಸುರುಮಾಡ್ತ್... ಓಡಿಓಡಿ ಬೊಚ್ಚುಕನ ಅಲ್ಲೆ ದಾರಿ ಕರೆಲಿ ಒಂದು ಮಾಯಿನಮರದ ಕೆಳಗೆ ನೀರ್ ಕಮ್ಮಿ ಬೀಳ್ವಲ್ಲಿ ಕುದ್ದತ್. ಮೈಪೂರಾ ಚಂಡಿ ಆಗಿ ಚಳಿಲಿ ನಡ್ಗಿಕೆ ಸುರು ಆತ್. ಸ್ವಲ್ಪ ಸಂಕಟಮರ್ಕ ಆದೆ ಅನ್ನಿಸಿತ್... ಹೊಟ್ಟೆಲಿದ್ದ ಮೊರಿಗ "ಅಮ್ಮ ಏನಾದರ್ ತಿಂಬಕ್ಕೆ ಕೊಡು" ಅಂತ ಮೊರ್ಡುವ ದನಿ ಕೇಳಿಸಿದಾಂಗೆ ಆತ್. ಬಹುಶಃ ಸುರುನ ಗರ್ಭ ಆದರ್‌ಂದ ಏನೋ ಹೊಟ್ಟೆಲಿರ್ವ ಮೊರಿಗಳ ಮೇಲೇ ಪ್ರೀತಿ ಕಾಳಜಿ ವಹಿಸಿ, ಕುದ್ರಿಕಾಗದೆ ಸುರೆವ ಮಳೆಲಿ ಮತ್ತೆ ಓಡಿಕೆ ಸುರುಮಾಡ್ತ್. ಎಲ್ಲಿ ತಿಂಬಕ್ಕೆ ಸಿಕ್ಕದೆ ನನ್ನ ಗರ್ಭಿಣಿ ಮಾಡ್ದವಂಗೆ ನಾ ಯಾರುಂತ ಗೊತ್ತಿರಿಕಿಲೆ ಇನ್ನು ಅವನ ಹುಡುಕುದು ಸೆರಿ ಅಲ್ಲ ನನ್ನ ಮಕ್ಕಳಿಗಾಗಿ ನಾ ಬದ್ಕೊಕೆ ಅಂತ ಹೇಳಿಕಂಡ್ ಮಳೆಲಿ ಚಂಡಿ ಆಕಂಡ್, ಯಾರ್‌ದೋ ಕೊಟಿಗೆನ ಸೇರಿಕಂಡರೆ ದೊಣ್ಣೆಲಿ ಪೆಟ್ಟ್ ಬೀಳ್ವ ಪೂರ್ವಕಲ್ಪನೆ ನಾಯಿಗಿತ್. ಹಂಗಾಗಿ ತಿಂಬಕೆ ಏನಾದರ್ ಸಿಕ್ಕುದುಂತೇಳಿ ಹೊಟ್ಲು, ಅಂಗಡಿ ಇರ್ವತ್ತ ಓಡಿಕೆ ಸುರುಮಾಡ್ತ್. ನಾಯಿ ಮುಂದೆ ಮುಂದೆ ಓಡ್ತಾ ಇತ್. ಅದೇ ವೇಗಲಿ ನೀರು ಮುಂದೆ ಮುಂದೆ ಹರಿತ್ತಿತ್. ಅಂಗಡಿಂದ ಹೊರಗೆ ಬಿಸಾಡ್ದಾ ತಿಂಡಿ ಬ್ರೆಡ್‌ರಗ ನೀರ್ಲಿಮುಳ್ಗಿಕೊಂಡು ತೇಲಿಕೊಂಡು

ಹೋತಿತ್... ಬಾಯಿಹಾಕಿರೆ ನೀರ್ನ ಸೆಲೆಲಿ ಕೊಚ್ಚಿಹೋವೆತಾ ನೆನ್ನಿ ನೀರ್ನ ನೋಡಿಕಂಡ್ ನಿತ್ತತ್. ಹುಡುಕ್ಕುವ ತಿನ್ಸಿಲಿ ತೇಳಿ ಕಾಕನ ಬೊದ್ಕು ಕೂಡ ಅದೇ ಪ್ರವಾಹಲಿ ಕೊಚ್ಚಿಹೋವಾಂಗೆ ಕಣ್ಣಿಗೆ ಕಂಡತ ಮನ್ಸ್‌ಗೆ ಬೇಜಾರ ಆದರೂ ಹೆದರದೆ ನಾಯಿ ತಿಂಬೊದರ ಯೋಚನೆ ಬುಟ್ಟು ಮತ್ತೆ ಮುಂದಕ್ಕೆ ಮಳೆಲೆ ಓಡಿಕೆ ಸುರುಮಾಡ್ತು. ದಾರಿಕರೆಲಿ ಪಾನಿಪುರಿ ಮಾರುವ ಭಯ್ಯನ ಟಾರ್ಪಲ್ಮುಚ್ಚಿದ ಗಾಡಿಯಂಗಡಿ ಕಂಡತ್, ನಿಲ್ಲದೆ ಓಡಿಹೋಗಿ ಅದರಡಿಗೆ ಸೇರಿಕಂಡತ್. ಮಳೆ ಜೋರಾಗಿ ಸುರ್ಯೇತಿದ್ದರ್‌ಂದ ಭಯ್ಯ ಪಾನಿಪುರಿ ಗಾಡಿಯಂಗಡಿನ ಮುಚ್ಚಿಹೋಗಿತ್. ಇನ್ನೂ ಇದರ ಅಡಿಗೆ ಜನ ಯಾರು ಬಾಕಿಲೆ ಅಂತ ನೆಮ್ಮದಿ ಆತ್. ಗಾಡಿಯಂಗಡಿನ ಕರೆಲಿ ಕಣಿ ಇದ್ದರ್‌ಂದ ನೀರು ಪೂರಾ ಕಣಿಲೆ ಹರ್ಯೇತಿತ್. ಅದರಡಿಲಿ ತಿರ್ಗಿತಿರ್ಗಿ ಜಾಗೆ ಮಾಡಿ ಮಲ್ಗಮಾಂತ ನೆನ್ಸುಕನ ಚಕ್ರದ ಕರೆಲಿ ಪೂರಿ, ಬ್ರೆಡ್ಡ್‌ಪಾತಿ ತುಂಡುಗ ಪೂರಾ ಬಿದ್ದ್‌ಕಂಡಿತ್. ಅದರ ಪೂರಾ ಹೆಕ್ಕಿ ತಿಂದತ್. ಮಳೆ ಸ್ವಲ್ಪ ಕಮ್ಮಿ ಕಮ್ಮಿ ಆಗಿ ನಿತ್ಕಂಡ್ಬಾತ್. ತುಂಬು ಗರ್ಭಿಣಿ ನಾಯಿಗೆ ಹೊಟ್ಟೆಬೇನೆ ಜೋರಾಗಿ ಲಾಯ್ಕ್‌ನ ಎರಡು ಮೊರಿಗಳಿಗೆ ಜನ್ಮ ಕೊಟ್ಟತ್. ನಾಯಿ ಪ್ರೀತಿಲಿ ಮೊರಿಗಳ ನೆಕ್ಕಿತ್. ಮಳೆಗೆ ನೆಲೆ ಇಲ್ಲದೆ ಭಾರೀ ಕಷ್ಟಲಿ ಮೊರಿಗಳ ಹೊತ್ತುಕಂಡು ಬಂದು ನೆಲೆ ಸೇರಿಲಾಯ್ಕನ ಮೊರಿಗಳಿಗೆ ಜನ್ಮ ಕೊಟ್ಟಾಕನ ಖುಸಿಲಿ ದೇವರಿಗೊಂದು ಧನ್ಯವಾದ ಹೇಳ್ತ್. ಮುಂದೆ ಹಿಂಬೊತ್ತು ಬಂದು ವ್ಯಾಪಾರ ಮಾಡ್ವ ಭಯ್ಯನ ಗಾಡಿಯಂಗಡಿ ಕೆಳಗೆ ನಾಯಿನು ಎರಡು ಮೊರಿಗಳು ಬೊದ್ಕಿಕ್ಕೆ ಸುರುಮಾಡ್ದ ನಾಯಿಗ ತೇಲ್ರೆ ಪ್ರೀತಿ ಇಸಿಕಂಡಿದ್ದ ಭಯ್ಯ ಹೆಚ್ಚಾದರ ಪೂರಾ ನಾಯಿಗಳಿಗೆ ಹಾಕ್ತಿದ್ದ. ನಾಯಿಗಳೂ ಅವಂತೇಲ್ರೆ ಭಾರೀ ಹಚ್ಚಿಕಂಡಿದ್ದ. ದಷ್ಟಪುಷ್ಟ ಆಗಿ ಬೆಳ್ಕಂಡಿದ್ದ ಮೊರಿಗ ಪೊರ್ಲುಪೊರ್ಲು ಪುಡ್ಕೆನೆ ಕಾಣ್ತಿದ್ದ. ಪಾನಿಪುರಿ ತಿಂಬಕ್ಕೆ ಬಂದ ಒಂದು ಜನ ಅದರ್ಲಿ ಪೊರ್ಲುನ ಗಂಡುಮೊರಿನ ನೋಡಿ ಬಯ್ಯನೊಟ್ಟಿಗೆ ಕೇಳಿ ಚೀಲಲಿ ತುಂಬುಸಿ ತೆಕ್ಕೊಂಡು ಹೋದ. ನಾಯಿ ತನ್ನ ಇನ್ನೊಂದು ಮೊರಿನ ತಬ್ಬಿ ಕಣ್ಣೀರು ಇಸಿ ಎಲ್ಲಾದರೂ ಪೊರ್ಲುಲಿ ಬೊದ್ಕಿ ಸುಖವಾಗಿರುಂತಾ ಹಾರೈಸಿತ್.

ಇತ್ತ ಯಾರೋ ತೆಕಂಡು ಬಂದ ಗಂಡುಮೊರಿ ಒಂದು ಮನೆ ಸೇರಿಕಂಡತ್. ಆ ಮನೆಲಿ ಇಬ್ಬೊರು ಮಕ್ಕ ನಾಯಿಮೊರಿನ ನೋಡಿ ಕುಸಿಲಿ ಹಿಡ್ಕೊಂಡು ಆಟ ಆಡಿಕೆ ಸುರುಮಾಡ್ದ. ಆ ಮೊರಿಗೆ ಗೂಡೆ

ಜಾಕಿಂತ ಹೆಸರು ಇಸಿರೆ  ಆ ಮನೆನ ಹೈದ "ನಾಯ್ಡು" ಅಂತ ಹೆಸರು ಇಸಿ ಕರೆಕೆ ಸುರುಮಾಡ್ದ. ಆಮೇಲೆ ಅದು ನಾಯ್ಡು ಆಗಿನೇ ಮನೆಯವುಕ್ಕೆ ಅದೊಂದು ನಾಯಿಯಂತೆ ಭಾವನೆ ಬಾರದೆ ನಮ್ಮ ಹಂಗೆನೇ ಮನೆಲಿ ಒಬ್ಬಂತ ನೆನ್ಸಿ ಅಷ್ಟೇ ಖುಸಿಲಿ ನೋಡಿಕಂತಿದ್ದ. ಅದು ಹೊರಗೆಂದ ತಂದ ಬೀದಿನಾಯಿನ ಕೂಸು ಅಂತ ನೆನಪೇ ಬರ್ತಾ ಇತ್ಲೆ. ಒಮ್ಮೆ ನಾಯ್ಡುಗೆ ಊರುನ ಹೊರಗೆ ಯಾರೋ ಮೊನ್‌ಸರ್ಗ ವಿಷ ಇಸಿ ಕೊಲ್ಲಿಕೆ ನೋಡ್ದ. ಯಾಕೆಂತೇಳ್ರೆ ನಾಯ್ಡು ಬಾಳಚುರುಕು, ರಾತ್ರೆಹಗಲು ಚಟಪಟಕ್ತೇಳ್ರೂ ಬೊಬ್ಬೆ ಹಾಕಿ ಬೊಗಳಿ ಮನೆಯವರ ಗಮನಕ್ಕೆ ತರ್ತಾ ಇತ್ತ್. ಮನೆಕಾಯ್ವ ಗುಣ ಉಂಡ ಮನೆಗೆ ರಕ್ಷಣೆ ಮಾಡ್ವ ನಿಯತ್ನ ಗುಣ ನಾಯಿಗಳಿಗೆ ಮಾತ್ರ ಇರ್ವಂತದ್ದು. ಹಿಂಗಿರ್ಕನ ವಿಷತಿಂದ ನಾಯ್ಡುನ ಹೀನಸ್ಥಿತಿ ನೋಡಿ ಆ ಮನೆ ಮಕ್ಕ ಉಂಬೊದು ತಿಂಬೋದು ಬುಟ್ಟು ಮರ್ಡಿಕೆ ಸುರು ಮಾಡ್ದ. ಅವರು ಮನೆಲಿ ಈ ಹಿಂದೆ ನಾಯಿಗಳಿಗೆ ಏನೇ ಸಮಸ್ಯೆ ಆದರೂ ಬದುಕಿಸುವ ಮೊದ್ದು ಹಿರಿಯವುಕ್ಕೆ ಗೊತ್ತಿದ್ದರ್‌ಂದ ಅದರ ಮನೆ ಹೈದ ಕಲ್ತುಕಂಡು ನಾಯ್ಡುನ ಮೇಲೆ ಪ್ರಯೋಗಿಸಿತ್. ನಾಯಿನ ಬಾಯಿ ಅಗಲಿಸಿ ಕೊಳ್‌ಪ್ಪಲೆ ಮೊಸರುನ ಸುರ್ದು ನಾಯಿನ ಬೊದ್ಕಿಸಿಕೆ ಹರಸಾಹಸ ಪಟ್ಟದೆ ಆದರೂ ನಾಯಿ ಮರಿ ಬೊದ್ಕಿ ಮೇಲೆ ಬರುವ ಸಾಧ್ಯತೆ ಕಮ್ಮಿನೆ ಆತ್. ನಮ್ಮ ನಡುವೆ ನಮ್ಮವನೇ ಆಗಿದ್ದ್ ಕಣ್ಣೆದುರೆ ಮರೆಯಾದವೆ ಅಂತ ಹೇಳ್ದೆ ಮನಸ್ಸುಗೇ ಎಷ್ಟು ಬೇನೆ ಆದೆ ಹೇಳಿ. ಆ ಮಕ್ಕ ಪ್ರೀತಿಲಿ ಸಾಂಕಿದ ನಾಯಿನ ಊರ್ನ ಯಾರೋ ವಿಸ ಇಸಿ ಕೊಂದೇಬುಟ್ಟ. ಬೊಳ್ಪಾಕನ ಮನೆಬಾಗಿಲ್ಗೆ ಮೊರೆಮಾಡಿ ವೇದನೆಲಿ ಕಣ್ಣೀರ್ ಸುರ್ಸಿ ಸಾಯಕನ ಆ ಪರಿಸ್ಥಿತಿ ಭಾರೀ ನೋವು ತಂದದೆ. ಅದರ ಮತ್ತೆ ಅವೆಲ್ಲ ಸೇರಿ ಚಾಳೆಮರದ ಬುಡಲಿ ಇಸಿ ಮಣ್ಣು ಮಾಡ್ದ. ಆ ಚಾಳೆ ಈಗ ಮರ ತುಂಬಾ ಫಸಲ್ಕೊಡ್ಕನ ಮತ್ತೆ ಮತ್ತೆ ಮನೆಮಕ್ಕಳ ನೆನಪುಲಿ ಜೀವಂತವಾಗಿಯೇ ಉಳ್ದುಟ್ಟು. ನಾಯ್ಡುನ ಹೆತ್ತವ್ವ ಮೊರಿನ ಹಿಡ್ದು ತೆಕಂಡೋಕನ ಎಲ್ಲಾ ಪೂರ್ಲುಲಿ ಬೊದ್ಕಿ ಸುಖವಾಗಿರುಂತಾ ಹಾರೈಸಿರೂ ಜನಗ ಅದರ ಕೊನೆಗೂ  ಬೊದ್ಕಿಕೆ ಬುಟ್ಟತ್ಲೆ.  ನಾಯಿಗಳಿಗೆ ಒಂದು ಕಡೆ ಆಸರೆ, ಪ್ರೀತಿ ಸಿಕ್ಕಿರೂ ಮತ್ತೊಂದು ಕಡೆ ನೋವು, ಬೊಯ್ಗಳು ಸಿಕ್ಕಿದೆ. ಯಾವುದೇ ಪ್ರಾಣಿಗ ಇರಲಿ ಅವುಗಳಿಗೆ ಭಾವನೆಗ ಇದ್ದದೆ. ಮೊನ್‌ಸಂಗಳ ಮೇಲೆ ಪ್ರೀತಿ ಇದ್ದದೆ. ಆದರೆ ನಾವು ಮೊನ್‌ಸಂಗ

ನಾಯಿ ಕೊತ್ತಿಂತ ನೋಡದೆ ಸಿಕ್ಕಿದರಲ್ಲಿ ಹೊಡ್ದು ಬೊಯಿದ್ ಬೆರ್ಸುವೆ. ಏನೇ ಆಗಲಿ ಬಾಯಿಬಾರದ ಪ್ರಾಣಿಪಕ್ಷಿಗಳ ಮೇಲೆ ಪ್ರೀತಿ ಇರಲಿ. ಅವು ನಾವುಗೆ ನೀಡುವ ಪ್ರೀತಿ ಮುಗ್ಧವಾಗಿ ನಿಷ್ಕಲ್ಮಶವಾಗಿ ಇದ್ದದೆ.

**ಬರ್ದವು: ಶರಣ್ಯ ಕೋಲ್ಚಾರ್**
**ಪಟ್ಟಡ ದೀಕ್ಷಿತ್**

ಅರೆಭಾಷೆ ಅಕಾಡೆಮಿ ಕಡೆಂದ ಸುಬ್ರಹ್ಮಣ್ಯಲಿ ನಡ್ಸಿಕೊಟ್ಟ ಲೇಖನ ಕೌಶಲ್ಯ ತರಬೇತಿ ಕಾರ್ಯಕ್ರಮಲಿ ಖ್ಯಾತಬರಹಗಾರ ವಸುಧೇಂದ್ರ ಅವರ ಕಥಾಚಟುವಟಿಕೆಲಿ ನಾನು ಶರಣ್ಯ ಕೋಲ್ಚಾರ್ ಮತ್ತೆ ಪಟ್ಟಡ ದೀಕ್ಷಿತ್ ಸೇರಿಕಂಡ್ ಹೆಣೆದ ಕಥೆ.

---

**ಶರಣ್ಯ ಕೋಲ್ಚಾರ್**
ಕೋಲ್ಚಾರ್ ಮನೆ & ಅಂಚೆ, ಆಲೆಟ್ಟಿ ಗ್ರಾಮ,
ಸುಳ್ಯ ತಾಲೂಕು, ದ.ಕ. 574239
ಮೊಬೈಲ್ : 8762686355

**ಪಟ್ಟಡ ದೀಕ್ಷಿತ್**
ದ್ವಿತೀಯ ಬಿ.ಎ.
ಸರಕಾರಿ ಪ್ರಥಮ ದರ್ಜೆ ಕಾಲೇಜು, ಮಡಿಕೇರಿ
ಮೊಬೈಲ್ : 9535927339

# ತಲೆಬಿಸಿ ಎಲ್ಲವೊಕು ಉಟ್ಟು ಮಾರಾಯ್ರೆ

● ಲೀಲಾಕುಮಾರಿ

ಊರ್‌ನ ತೋಟಲಿ ಅಡ್ಕೆ ಹಣ್ಣಾಗ್ತ ಬಂದರೆ ಸಾಕ್.. ಶೇಷಪ್ಪಣ್ಣಂಗೆ ಎಲ್ಲಿಲ್ಲದ ಡಿಮ್ಯಾಂಡ್. ಕಾಲಿಗೆ ದಳೆ ಸಿಕ್ಕಿಸಿ ಸರಸರ ಹತ್ತಿರೆ ಕಮ್ಮುಲಿರುವ ಅಡ್ಕೆ ಕೀಲೆ ಹೆದರಿನೆ ಕೆಳಗೆ ಬೀಳೋಕು ಅಂತ ಚಾಲಾಕ್. ಅದರ್‌ಂದಾಗಿ ಶೇಷಪ್ಪಣ್ಣನ ಡಿಮ್ಯಾಂಡ್ ಕಮ್ಮಿ ಇತ್ಲೆ ಬುಡಿ. ಅಷ್ಟು ಸಂಪಾದನೆ ಮಾಡಿರೂ ಅದ್ ಕುಡ್ಯಕೆ ಸಾಕುದುಲೆತ ಶೇಷಪ್ಪಣ್ಣನ ವಾದ. ವರ್ಷಪೂರ್ತಿ ಸಂಪಾದನೆ ಇಲ್ಲೆಲೆ ಪಾಪ. ಅಷ್ಟೂ... ಕುಡಿಯದಿದ್ದರೆ ದೇಶ ಉದ್ಧಾರ ಆದು ಹೆಂಗೆ?

ಹೆಣ್ಣ್ ಅಮ್ಮಣಿ ಬೊಳ್ಪಿಗೆ ಎದ್ದ್ ಒಲೆಬೂದಿ ಎತ್ತಿ, ಕಿಚ್ಚಿ ಮಾಡಿ ದೊಡ್ಡ ಗ್ಲಾಸ್‌ಲಿ ಕಣ್ಣ ಚಾ ಕುಡ್ದ್, ಕೆಲ್ಸ ಸುರು ಮಾಡಿರೆ, ಒಂಬತ್ತ್ ಗಂಟೆಗೆ ಉಸ್ಸಪ್ಪಾ ಅಂತ ಒಂಚೂರ್ ಕುದ್ದುರ್ದು, ಹಂದಿ ಮರ್ಗಿಲಿಗೆ ತಿನಿ ಹಾಕಿ ಬಂದ್ ಬೊಡ್ ರೊಟ್ಟಿ ಹೊಯ್ಯಕಾನ ಹಂದಿಮರ್ಗಿಲಿಗೆ ನಾಯಿ ಬಾಯಿ ಹಾಕಿ ಮುರ್‌ಗುಟಗ್ಗಿರೆ, ಮತ್ತೆ ಅಲ್ಲಿಗೆ ಓಡ್ದು ಇನ್ನೊಂದ್ ಕೆಲ್ಸ.

ಅಂತೂ ಮಂಜ ಪ್ರಕಾಶ ಟೇಪಿಂಗ್ ಮುಗ್ಸಿ ಬಾಕಾನ ಬಿಸಿ ಬೊಡ್ ರೊಟ್ಟಿ ಇರೊಕಲ... ಹಿರ್ದ ಕೊಳ್ಳಿನ ಮತ್ತೆ ಒಲೆಗೆ ದೂಡಿ, ದಾವುಗೆ ಬೆಂದಂಗಾದ ಕೈನ ಉಜ್ಜಿಕ್‌ಂಡ್ ರೊಟ್ಟಿ ಹೊಯ್ವ ಅಮ್ಮಣಿಗೆ ಆಚೆ ಮನೆ ಮೋಹಿನಿನ ಮಗಳ್ ಯಾವನೊಟ್ಟಿಗೊ ಬೈಕ್‌ಲಿ ಹೋದ ವಿಷಯನ ಈಚೆ ಮನೆ ಜಾನಕಿ ಹಕ್ಕಲೆ ಹೇಳುವ ಅರ್ಜೆಂಟ್. ಹಂಗೆನೆ ಕಡೆನ ಬೊಡ್ ರೊಟ್ಟಿಗೆ ಬಾವುಡೆ ಮುಚ್ಚಿಕೆ ಮರ್ತ್ ಹೋದ್‌ತ ಹೇಳಿರೂ ಸುಳ್ಳಾಕಿಲೆ. ತನ್ನ ಮಗಳ್ ಕಂಟ್ರೋಲ್‌ಗೆ ಸಿಗದಿರಿಕನ ಪ್ರಾಯ ಕೂಡ ನೋಡದೆ, ಬೀಟಿ ಮರದ ಬಣ್ಣದ ಹೈಂದ್‌ಂಗೆ ಹಿಡ್ದ್ ಕೊಟ್ಟು ಮದ್ವೆ ಮಾಡಿದ್ ನೆನ್ಪಾಗದೆ ಇತ್ಲೆ. ಮನೆ ಕತೆ ಎಷ್ಟಿದ್ದರೂ ಆಚೆ ಮನೆ ಈಚೆ ಮನೆ ವಿಷಯ ಮಾತಾಡುವಷ್ಟು ಖುಷಿ ಹೆಂಗಸರಿಗೆ ಯಾವುದುಟ್ಟು ಹೇಳಿ?

ರಬ್ಬರ್ ಶೀಟ್ ಹೊಡ್ಯೆಕೆ ಹೋಕು, ಬೇಗ ತಿಂಡಿ ಕೊಡುತ ಹೇಳ್ದ್ ಕೇಳಿ, ಗಂಡಂಗೂ ಮಂಜಂಗೂ ರೊಟ್ಟಿ ಮತ್ತೆ ಹಿಂದೆನ ದಿನ ತೋಂಡಿ

ಇಸಿದ ಕೋಳಿ ಗೈಪುನ ಬಡ್ಸಿ, ಪ್ರಕಾಶಂಗೆ ಮದ್ವೆ ಯೋಗ ಏನರ್ ಉಟ್ಟತ ಟಿ.ವಿ.ಲಿ ಬಾತಿದ್ದ ಭವಿಷ್ಯವಾಣಿಗೆ ಕೆಬಿ ಕೊಟ್ಟ ಅಮ್ಮಣಿ ಜ್ಯೋತಿಷ್ ಎಂತ ಪರಿಹಾರ ಹೇಳಿರೂ ಮಾಡ್ಸಿಕೆ ರೆಡಿ ಇದ್ದಂಗೆ ಇತ್ತ್.

ಎಷ್ಟ್ ಶೀಟ್ ಸಿಕ್ಕಿತ್ ಮಂಜ? ಅಪ್ಪನ ಪ್ರಶ್ನೆಗೆ ಶೀಟ್ ಎಷ್ಟ್ ಸಿಕ್ಕಿದೆ ಹಿಂಗೆ ಬುಡದೆ ಮಳೆ ಸುರ್ದರೆ? ರೇಟ್ ಆತ್ತ ಖುಷಿಲಿ ಇದ್ದರೆ ದಿನಂದ ದಿನಕ್ಕೆ ಶೀಟ್ ಕಮ್ಮಿ ಆಗ್ತಾ ಉಟ್ಟು. ಹಿಂಗಾದ್ರೆ ಲೋನ್ ಕಟ್ಟಿದಂಗೆ... ಬಡ್ಡಿ ಬುಟ್ಟವೆ, ಮೂರು ತಿಂಗ ಕಟ್ಟುದು ಬೇಡ, ಹಂಗೆ ಹಿಂಗೆ ಹೇಳ್ದ ಬ್ಯಾಂಕ್‌ನೊವು ಈಗ ಇಪ್ಪತ್ತೈದು ಸರ್ತಿ ಫೋನ್ ಮಾಡಿವೆ... ಮೂರ್ ಕಾಸಿನೊವ್.

ಹಿಂಗೆ ಬೈಕಂಡ್ ಅಟ್ಟಲಿ ಒಟ್ಟಿ ಇಸಿದ ಬೂಸ್ ಬಂದ ಶೀಟ್‌ನೆಲ್ಲ ಒಣ್ಗಿಕೆ ಹಾಕಿಕೆ ಅಪ್ಪನ ಕರ್ದರೆ ಅಪ್ಪ ಕಣ್ಣಿಗೆ ಕಂಡತ್ಲೆ. ಗುಡ್ಡೆಲಿರುವ ಜಗ್ಗುನ ಅಂಗಡಿಗೆ ಕೋಟ್ರ್ ಕುಡಿಯಕೆ ಹೋದದ್‌ತ ಬೇರೆ ಯಾರ್ ಹೇಳೊಕ್‌ತ ಇಲ್ಲೆ ಬುಡಿ. ಈ ದುಡಿವ ಜೀವಗಳ ಮೈ ಕೈ ನೋವಿಗೆ ಯಾವ ಮೂವ್, ಜಂಡ್‌ಬಾಂಬ್ ಕೂಡ ಕೋಟ್ರ್‌ನಷ್ಟ್ ಕೆಲ್ಸ ಮಾಡುದುಲೆ ಅಲ...! ಒಂದು ಕಡೆ ಅಡ್ಕೆಗೆ ಕೊಳೆರೋಗ, ಇನ್ನೊಂದು ಕಡೆ ಸಮಯ ಸಂದರ್ಭ ಇಲ್ಲದೆ ಸುರಿವ ಮಳೆಗೆ ಟೇಪಿಂಗ್ ಇಲ್ಲೆ. ಗೇರ್ ಮರ ಕಡ್ದ್ ರಬ್ಬರ್ ಹಾಕಿ ಆತ್. ಇದ್ದ ನಾಲ್ಕ್ ಗೇರುಮರದ ಹೂ ಎಲ್ಲಾ ಉದುರಿಟ್ಟು... ಗೇರ್‌ಬೀಜ ಇಲ್ಲೆ ಅನ್ನೊ ಟೆನ್ಷನ್‌ಗಿಂತ ಗೇರ್‌ಹಣ್ಣ್ ಸಿಕ್ಕುದುಲೆತ ತಲೆಬಿಸಿ ಶೇಷಪ್ಪಣ್ಣಂಗೆ! ಇದ್ದ ನಾಲ್ಕ್ ಕೋಳಿಗ ದೂಂಗಿವೆ. ಅವು ಸತ್ತರೆ ಹರ್ಕೆಗೆ ಊರುಕೋಳಿ ಎಲ್ಲಿಂದ ತಾದು? ದನಗ ಹಟ್ಟಿಲಿ ಉಪವಾಸ ಬಿದ್ದೊಳು. ಹುಲ್ಲು ಸೊಪ್ಪು ತಂದಾಕಿಗೆ ಅಮ್ಮಣಿನ ಮೊಣಕಾಲ್ ಬೇನೆ ಬುಡುದುಲೆ. ನಿತ್ಯಾನಂದ ಸ್ವಾಮಿ ಒಬ್ಬನ ಬುಟ್ಟು, ಉಳ್ದೆಲ್ಲ ಸ್ವಾಮೀಜಿ ಹಕ್ಕಲೆ ತೋರ್ಸಿ ಆತ್. ಗುಣ ಆವ ಯಾವ ಲಕ್ಷಣನೂ ಇಲ್ಲೆ. ಹಟ್ಟಿಲಿ ಗೊಬ್ಬರ ತುಂಬಿ, ತೆಗ್ಯಕೆ ಜನ ಸಿಕ್ಕದೆ ದನಗ ಚೋಳ್‌ಲಿ ಮಲ್ಗ್ಯೇಳೊ. ಇದೆಲ್ಲ ನೋಡಿಕನ ಶೇಷಪ್ಪಣ್ಣನ ತಲೆಬಿಸಿ ಜಾಸ್ತಿ ಆಗಿ ಒಂದು ಕೋಟ್ರ್ ಹೆಚ್ಚಿಗೆ ಬೇಕಾದೆ. ಹಿಂಗೆ ತಲೆಬಿಸಿ ಒಂದಾ ಎರಡಾ?

ಮಳೆಗಾಲ ಶುರು ಆಕೆ ಮುಂದೆ ಹೆಂಗಾರ್ ಮಾಡಿ ಪ್ರಕಾಶಂಗೆ ಮೊದ್ವೆ ಮಾಡೊಕ್. ಹೆಂಗೂ ಕೊರೊನ ಟೈಮ್ ಆದ್ದರ್‌ಂದ ಕಮ್ಮಿ ಖರ್ಚಿಲಿ ಮಾಡಿ ಮುಗ್ಸಿಕೆ ಇದರಂದ ಒಳ್ಳೆ ಟೈಮ್ ಬೇರೆ ಸಿಕ್ಕಿಕಿಲೆ.

ಮಂಜ ಬ್ರೋಕರ್‌ಗಳ ಸಹವಾಸ ಸಾಕ್. ಇನ್ನ್ ನೀನೆ ಎಲ್ಲಿಯಾರ್ ಒಳ್ಳೆ ಗೂಡೆ ಸಿಕ್ಕಿದೆನ ನೋಡು. ನಿನ್ನಮ್ಮಂಗೂ ಕೆಲ್ಸ ಮಾಡಿಕೆ ಆದುಲೆ. ಈಗನ ಕಾಲದ ಹೈದಂಗ ಎಲ್ಲ ಅವು ಅವೇ ನೋಡಿಕಂಡವೆ. ಪ್ರಾಯ ನಿತ್ತದೆನ? ಅಪ್ಪ, ಒಳ್ಳೆ ಗೂಡೆನ ಎಂತ ರೆಡಿ ಮಾಡುದಾ? ಮನೆಲಿ ಹಿಂಗೆ ಕೆಲ್ಸ ಮಾಡೊವುಕೆ ಯಾರ್ ಹೆಣ್ಣ್ ಕೊಟ್ಟವೆ? ಸಣಪ್ಪನ ಮಂಜ ನೋಡಿಕೆ ಬಾರಿ ಲಾಯಕ್ ಉಟ್ಟ? ಅವಂಗೆ ಗೂಡೆ ಸಿಕ್ಕಿಟು. ಯಾಕೆ ಹೇಳಿ ಅವ ಪೇಟೆಲಿ ಇರ್ದ್ ಅಲ... ನಾ ಈ ಹಳ್ಳಿಲಿ ಇರುವವರೆಗೆ ಗೂಡೆ ಸಿಕ್ಕಿಕಿಲೆತ ಗೊಣ್ಗಿದ ಪ್ರಕಾಶಂಗೆ ಪೇಟೆ ಪೇಟೆತ ಕೊಣ್ಕೊಂಡ್ ಹೋದವರ ಕತೆ ಎಂತಾ ಗೊತ್ತಾತ್ ಅಲ... ಕೊರೊನ ಎಲ್ಲವುಕೆ ಹಳ್ಳಿನ ಬೆಲೆ ತೋರ್ಸಿತ್ತಲ್ಲ ಅಂತ ಹೇಳಿಕನ ಶೇಷಪ್ಪಣ ಒಟ್ಟಿಗೆ ಅಮ್ಮಣಿನೂ ಸೇರಿಕಂಣ್ತ್.

ಅಂತೂ ಒಂದೆರಡ್ ವರ್ಷ ಗೂಡೆ ನೋಡಿಕೆ ಹೋದರ್ಲೆ ಸುಮಾರ್ ದುಡ್ಡ್ ಮುಗ್ತ್. ಪ್ರಕಾಶನ ತಲೆಲಿ ಅಲ್ಲಲ್ಲಿ ಕಪ್ಪು ಕೂದ್ಲ್ ಕಾಣ್ತಿತ್ ಅಷ್ಟೇ. ಹಿಂಗೆ ಹಳ್ಳಿಲಿ ಗೈಕೊಂಡ್ ಇದ್ದರೆ ನಂಗೆ ಮೊದ್ವೆ ಇಲ್ಲೆತ ನೆನ್ಸಿದ ಪ್ರಕಾಶ ಯೋಚನೆ ಮಾಡ್ತ್... ಹೆಂಗೂ ಅಪ್ಪ ಗಟ್ಟಿಮುಟ್ಟಾಗಿ ಒಳೊ.. ಕುಡ್ದಾಕನ ಮಾತ್ರ ತೂರಾಡ್ದ್ ಬುಟ್ಟರೆ ಬೇರೆ ಹೊತ್ತ್ಲಿ ತೋಟ ನೋಡಿಕಣುವೊ. ಕೊರೊನ ಹೆಂಗೋ ಚೂರ್ ಕಮ್ಮಿ ಆವುಟು. ಪೇಟೆಗೆ ಹೋಗಿ ಕೆಲ್ಸಕೆ ಸೇರಿ, ದುಡ್ಡು ಮಾಡಿ ಮೊದ್ವೆ ಆಗಿ ಮತ್ತೆ ಮನೆಗೆ ವಾಪಾಸ್ ಬಂದರೆ ಆತ್... ಇದೇ ವಿಷಯನ ಮನೆಲಿ ಹೇಳ್ತ್. ಬೇಜಾರ್ ಮಾಡ್ಕಂಡ ಅಪ್ಪ ಅಮ್ಮ ಒಪ್ಪಿದೊ...

ಅಂತೂ ಪ್ರಕಾಶ ಪೇಟೆ ಸೇರ್ತ್. ಸಣ್ಣ ಕೆಲ್ಸನೂ ಸಿಕ್ಕಿತ್. ಊರಲಿ ನೆಟ್‌ವರ್ಕ್‌ಗಾಗಿ ಗುಡ್ಡೆಗೋ ಮರಕೋ ಹತ್ತಕಾಯ್ತ್. ಪೇಟೆಲಿ ಎಷ್ಟೊತ್ತು ಬೇಕಾರ್ ಮೊಬೈಲ್‌ಲಿ ನೇತಾಡಕ್. ಅವರಿವರ ಕೇಳಿ ವಾಟ್ಸಾಪ್, ಫೇಸ್‌ಬುಕ್ ಎಲ್ಲ ಇನ್ಸ್ಟಾಲ್ ಮಾಡಿ ಆತ್. ಟೇಪಿಂಗ್ ಮರ್ತ್ ಹೋಗುವ ಮಟ್ಟಿಗೆ ಮೊಬೈಲ್ ಒಪರೇಟ್ ಮಾಡುದರ್ಲಿ ಎಕ್ಸ್‌ಫರ್ಟ್ ಆತ್. ಹಿಂಗಿರಿಕನ ಯಾವುದೋ ಒಂದು ಮಿಸ್‌ಕಾಲ್ ಬಂದೇ ಬುಟ್ಟತ್. ಕಾಲ್ ಬಾದೆ ಅಪರೂಪ ಇರಿಕನ ಮಿಸ್ಕಾಲ್‌ಗೆ ಕಾಲ್ ಮಾಡುವಷ್ಟು ಖುಷಿ ಬೇರೆ ಯಾವುದುಟ್ಟು ಹೇಳಿ. ಪ್ರಕಾಶ ಬುಟ್ಟತ್ಲೆ, ಕಾಲ್ ಮಾಡ್ತ್... ಆಚೆಂದ ಯಾವುದೋ ಗೂಡೆ ಮಾತಾಡ್ತ್. ಹಂಗೆ ಹಿಂಗೆ ಆಗಿ ವಾಟ್ಸಾಪ್‌ಲಿ ಮೆಸೇಜ್ ಮಾಡುವಷ್ಟ್ ಆತ್. ಬೆಳ್ಳಗಾದ ತಲೆಗೆ ಡೈ ಮಾಡ್ದ ಪ್ರಕಾಶ

ನೋಡಿಕೆ ಈಗ ಲಾಯಕ್ ಕಾಣ್ತಿತ್. ಇಬ್ಬರೂ ಗಂಟೆಗಟ್ಟಲೆ ಮಾತಾಡಿ, ಅಲ್ಲಿ ಇಲ್ಲಿ ಮೀಟ್ ಆಗಿ, ಅಂತೂ ಕಡೆಗೆ ಮೊದ್ವೆ ಆಗುವ ನಿರ್ಧಾರಕ್ಕೆ ಬಂದೊ. ಓ ಗೂಡೆನ ಬಗ್ಗೆ ಹೇಳ್ಲೇ ಅಲ... ಗೂಡೆನ ಮನೆ ಮೈಸೂರ್. ಡಿಗ್ರಿ ಮುಗ್ಸಿ ಬೆಂಗಳೂರ್‌ಲಿ ಕಂಪೆನಿ ಒಂದರ್ಲಿ ಕೆಲ್ಸ. ತಸ್‌ಠುಸ್ ಇಂಗ್ಲಿಷ್ ಬುಡಿಕೆ ಬಾತಿತ್. ಮನೆಯವ್ರ ಕಂಟ್ರೋಲ್‌ಗೆ ಸಿಗ್ತಿತ್ಲೆ ಗಡ. ಹಂಗೆ ಒಮ್ಮೆ ಮನೆಯಿಂದ ದಾಟಿರೆ ಸಾಕ್‌ತ ಮನೆವು ಕಾಯ್ತಿದ್ದೊ. ವಾಟ್ಸಾಪ್ ಫೇಸ್ಬುಕ್‌ಲಿ ಯಾವುದೊ ದೇಶದ ಹೈದ ಗೂಡೆಗ ಇನ್ನಾವುದೊ ದೇಶಕ್ಕೆ ಕನೆಕ್ಟ್ ಆದವೆ... ಅಂತರ್ದಲಿ ಕೊಡಗ್ನ ಹಳ್ಳಿ ಹೈದಂಗೂ ಮೈಸೂರ್ ಗೂಡೆಗೂ ಲವ್ ಆದದರ್ಲಿ ಆಶ್ಚರ್ಯ ಇಲ್ಲೆ ಬುಡಿ. ಗೂಡೆ ಸಿಕ್ಕಿದ ವಿಷಯನ ಪೋನ್‌ಲಿ ಹೇಳ್ದಾಗ ಶೇಷಪ್ಪಣ್ಣ ಅಮ್ಮಣಿ ಇಬ್ಬರೂ ಕಡೆಗೆ ನಾವು ನಂಬಿದ ವಿಷ್ಣುಮೂರ್ತಿ ಕೈ ಬುಟ್ಟಿತ್ಲೆತ ಖುಷಿಯಾದೊ. ಗೂಡೆನ ಜಾತಿ ಬೇರೆತ ಗೊತ್ತಾದಾಗ ಆ ಖುಷಿ ಸೊಂಯ್ ಅಂತ ಹೋತ್. ಬೇಡತ ಹೇಳಿರೆ ಪ್ರಕಾಶ ಕೇಳದಷ್ಟು ಮುಂದುವರ್ದ್ ಆಗಿತ್ತ್. ಏನಾರ್ ಆಗಲಿ ಮೊದ್ವೆ ಮಾಡುದೆ ಅಂತ ಯೋಚ್ನೆ ಮಾಡ್ದೆ. ಅಲ್ಲಿವರೆಗೆ ಜಾತಿವಾದಿಯಾಗಿದ್ದ ಶೇಷಪ್ಪಣ್ಣ ಈಗ ಜಾತಿಲಿ ಎಂಥ ಉಟ್ಟು-ಎಲ್ಲವರ ರಕ್ತ ಒಂದೇ. ಎಲ್ಲವು ಮೊನ್ಸರೇ... ಹಿಂಗೆಲ್ಲ ಅಂಗಡಿಲಿ ಕುದ್ದುಕೊಂಡ್ ಹೇಳ್ದರ ಕೇಳಿ, ಏನೋ ಯಡವಟ್ಟು ಆವುಟುತ ಎಲ್ಲವುಕು ಗೊತ್ತಾಗಿತ್.

ಇನ್ನು ಬೊಳಿಗಿಳಿ ನೋಡ್ದರ್ಲಿ ಏನೂ ಪ್ರೇಜನ ಇಲ್ಲೆ. ಹಂಗಾಗಿ ಕೂಡ್ಲೆ ಗೂಡೆನ ಮನೆ ನೋಡ್ವ ಸಂಪ್ರದಾಯ ಮುಗ್ಸಿ ಮೊದ್ವೆ ದಿನನೂ ನಿಘಂಟ್ ಮಾಡಿ ಆತ್. ಕೊರೊನ ನಿಯಮದಂಗೆ ಐವತ್ತ್ ಜನ ಸೇರ್ಸಿ ದೊಡ್ಡ ಗೌಜಿ ಗಮ್ಮತ್ತಿಲ್ಲದೆ ಮೊದ್ವೆನೂ ಮುಗ್ಸಿದೊ. ಗೂಡೆನ ಕೈ ತೊಳ್ದ್ ಮುಟ್ಟೊಕ್ ಹಂಗೆ ಬೆಳ್ಳಬೆಳ್ಳಂಗೆ ಇತ್ತ್. ಮೊದ್ವೆಗೆ ಸೇರ್ದ ಹೆಂಗಸ್ರೆಲ್ಲ ಗುಸುಗುಸು ಮಾತಾಡ್ತಿದ್ದೊ. ಇದ್ ಈ ಮನೆಗೆ ಅಡ್ಜೆಸ್ಟ್ ಆಕೆ ಭಂಗ ಉಟ್ಟು.. ಮತ್ತೆ ಪೇಟೆಗೆ ಓಡದೆ ಇರ್ಕಿಲೆ ಹಂಗೆ ಹಿಂದೆ...

ಮಾರಾನೇ ದಿನ ಗೂಡೆ ಮೊಣ್ಕಾಲ್ ಮೇಲೆನ ಚಡ್ಡಿ ಹಾಕಂಡ್ ಇದ್ದದ್ ನೋಡಿ ಶೇಷಪ್ಪಣ್ಣನೂ ಅಮ್ಮಣಿನೂ ಗಾಬರಿಯಾದೊ... ಅಮ್ಮಣಿ ಹಕ್ಕಲೆ ಹೋಗಿ, ಇದ್ ಹಳ್ಳಿ, ಇಲ್ಲಿ ಹಿಂಗೆಲ್ಲ ಡ್ರೆಸ್ ಹಾಕಿರೆ ನೆರೆಹೊರೆಯವರ ಬಾಯಿ ಸುಮ್ಮನಿರ್ದುಲೆತ ಹೇಳ್ತಿದ್ದರೂ... ಕಾಲ್ ಮೇಲೆ ಕಾಲ್ ಹಾಕಿ ಕುದ್ದ ಗೂಡೆ, ಮೊಬೈಲ್‌ಲಿ ನೆಟ್ವರ್ಕ್‌ಗಾಗಿ

ಹುಡ್ಕುತಿತ್. ನೆಟ್‌ವರ್ಕ್ ಸಿಕ್ಕುದುಲೆತ್ ಗೊತ್ತಕನ ಮೋರೆ ಊದಿಸಿದ ಗೂಡೆನ ನೋಡ್ದ ಪ್ರಕಾಶ ಕೆಲ್ಸ ಬುಟ್ಟು ನೆಟ್‌ವರ್ಕ್ ಸಿಗುವ ಗುಡ್ಡೆಗೆ ಕರ್ಕೊಂಡ್ ಹೋರ್ಟತ್. ಮನೆ ಕೆಲ್ಸ, ಅಡ್ಗೆ ಕೆಲ್ಸಕೆ ಹೆಲ್ಪ್ ಮಾಡುದ್ ಬುಡಿ... ಮಾಡಿಕೊಟ್ಟ ಅಡ್ಗೆನ ಬಾಯಿಮುಚ್ಚಿಕೊಂಡ್ ತಿನ್ನದೆ ಪಿಜ್ಜಾ, ಬರ್ಗರ್ ಕೇಳಿಕನ ನಾಳೆ ಪೇಟೆಂದ ತಂದ್ ಕೊಟ್ನೆತ ಪ್ರಕಾಶ ಸಮಧಾನ ಮಾಡ್ದರ ನೋಡಿ, ಸೊಸೆನ ಮೇಲಿನ ಸಿಟ್ಟಿಗಿಂತ ಮಂಜನ ಮೇಲೆ ಸಿಟ್ಟ್ ಬಂದ್ ಮಾತಾಡಿಕೆ ಆಗದೆ ತಲೆ ಮೇಲೆ ಕೈ ಹೊತ್ತ್ ಕುದ್ದೊ ಶೇಷಪ್ಪಣ್ಣ ಮತ್ತ್ ಅಮ್ಮಣಿ.

ಅಂತೂ ಇಂತೂ ಎರಡು ತಿಂಗ ಆಕಾನ ಮನೆಲಿ ಲಟಾಪಟಿ ಜಾಸ್ತಿ ಆತ್. ನೆರೆಹೊರೆವು ಒಳಗೊಳಗೆ ಖುಷಿಪಟ್ಟೊ. ಅತ್ತೆ ಬಗ್ಗೆ ಸೊಸೆಗೂ ಸೊಸೆ ಬಗ್ಗೆ ಅತ್ತೆಗೂ ಹೇಳಿಕೊಟ್ಟು ಮನೆ ಒಡೆವ ಕೆಲ್ಸ ಒಳಗೆಂದ ಒಳಗೆ ಮಾಡಿ ಕಡೆಗೆ ಸಾಧಿಸಿಯೇ ಬುಟ್ಟೋ. ಒಂದ್ ಕಡೆ ಅಪ್ಪ ಅಮ್ಮ, ಇನ್ನೊಂದ್ ಕಡೆ ಕಟ್ಟಿಕೊಂಡ ಹೆಣ್ಣ್... ಮಧ್ಯಲಿ ಸಿಕ್ಕಿಹಾಕಂಡ ಪ್ರಕಾಶ ಕಡೆಗೆ ಹೆಣ್ಣ್‌ನ ಪರವಾಗಿ ನಿತ್ತತ್. ಅಲ್ಲಿವರೆಗೆ ಅಪ್ಪ ಅವ್ವಂಗೆ ವಿರೋಧ ಮಾತಡದವ ಅಂದ್ ಸ್ವಲ್ಪ ಜಾಸ್ತಿನೆ ಮಾತಾಡಿ, ಅಪ್ಪ ಅಮ್ಮನ ಕಣ್ಣ್‌ಲಿ ಕಣ್ಣೀರ್ ಹಾಕ್ಸಿತ್. ಮಾರ್ನೇ ದಿನ ಗಂಟ್ ಮೂಟೆ ಕಟ್ಟಿಕೊಂಡ್ ಹೆಣ್ಣ್‌ನ ಕರ್ಕೊಂಡ್ ಮತ್ತೆ ಬೆಂಗಳೂರ್‌ಗೆ ಹೊರ್ಟ್ಯಾತ್. ಕಳ್ಸಿಕೆ ಮನ್ಸಿಲ್ಲದಿದ್ದರೂ ಅಲ್ಲಿಯಾರ್ ಕುಷಿಯಾಗಿರ್ಲಿತ ಕಣ್ಣೀರ್ ಹಾಕಂಡೆ ಕಳ್ಸಿಕೊಟ್ಟೊ. ಹೋದ ಸುರುಲಿ ಪೋನ್ ಮಾಡ್ತಿತ್ತಾದರೂ ಮತ್ತೆ ಮತ್ತೇ ಅದೂ ಕಮ್ಮಿ ಆಗ್ತಾ ಬಾತ್.

ಇತ್ತ ಶೇಷಪ್ಪಣ್ಣ ಬಿಟ್ಟಿಯಾಗಿ ಕೊಟ್ರೊ ದನಗಳ ತಕಣೊವ್ ಇಲ್ಲದಿರಿಕನ ಹೆಂಗೋ ಮೂರ್ ಕಾಸ್‌ಗೆ ಮಾರ್ದೊ. ನೆಂಟ್ರ್ ಬಂದಾಗ ಎಲ್ಲ ಊರ್ ಕೋಳಿನ ಕೊಂದ್ ಗೈಪ್ ಮಾಡಿ ಮುಗ್ಸಿದೊ. ಇದ್ದ ಎರಡ್ ಹಂದಿನ ಅಮವಾಸ್ಯೆ ದಿನ ಹೊಡ್ಸಿದೋ. ಈಗ ಒಂಚೂರ್ ತಲೆಬಿಸಿ ಕಮ್ಮಿ ಆತ್. ಅಮ್ಮಣಿಗೆ ಮಂಡಿ ಬೇನೆಲಿ ಮನೆ ಕೆಲ್ಸ ಮಾಡ್ದೇ ಕಷ್ಟ ಆಗಿತ್ತ್. ಸಂಬಳ ಕೊಟ್ಟ್ ಟೇಪಿಂಗ್ ಮಾಡ್ಸಿಕೆ ಆಗದ ಶೇಷಪ್ಪಣ್ಣ ತಾನೇ ಟೇಪಿಂಗ್ ಮಾಡ್ತಿದ್ದೊ. ಮಾಡ್ದ ಕೃಷಿನ ನೋಡಿಕೆ, ಜಾಗ ಇದ್ದರೂ ಕೃಷಿ ಮಾಡಿಕೆ ಜನ ಇಲ್ಲದಂಗಾತ್. ಮುದಿಜೀವ ಎರಡ್ ಯಾಗೋಳ್ ಮಂಜನ ನೆನ್ಸಿ ಕೊರ್ಗ್ತಿದ್ದೊ.

ಅದೊಂದು ದಿನ ಬೆಳಿಗ್ಗೆ ಕಣ್ಣ ಚಾ ಕುಡಿದ್ ಟೇಪಿಂಗ್‌ಗೆ ಹೋದ ಶೇಷಪ್ಪಣ್ಣ ಗಂಟೆ ಹತ್ತಾದರೂ ಬಾತ್ಲೆ. ಜಗ್ಗುನ ಅಂಗಡಿಗೆ ಕುಡ್ಯಕೆ ಹೋಗಿರುವೊತ ನೆನ್ಸಿದ ಅಮ್ಮಣಿ ಅಷ್ಟು ತಲೆ ಕೆಡ್ಸಿಕಂಡತ್ಲೆ. ಮಧ್ಯಾನ ಆದರೂ ಪತ್ತೆ ಇಲ್ಲೆ, ಅಮ್ಮಣಿನ ತಲೆಬಿಸಿ ಜಾಸ್ತಿ ಆತ್. ಕರೆವಷ್ಟೂ ಜೋರಾಗಿ ಕರ್ತ್... ಉಹೂಂ ಸುದ್ದಿ ಇಲ್ಲೆ. ಆಚೆ ಈಚೆ ಮನೆಗೆ ಪೋನ್ ಮಾಡಿ ವಿಚಾರ್ಸಿ ಆತ್... ಎಲ್ಲವು ಬಾತ್ಲೆತ ಹೇಳ್ದ ಮೇಲೆ ತಲೆಬಿಸಿಗೆ ಕಣ್ಣುಕತ್ತಲೆ ಬಂದಂಗೆ ಆಗಿ, ವೆಂಕಪ್ಪಣ್ಣ ಮತ್ತ್ ಜಗ್ಗುಗೆ ವಿಷಯ ತಿಳಿಸಿ ಮಟ್ಕೊಂಡೆ ಹುಡ್ಕಿಕೆ ಹೇಳ್ತ್. ಅವು ಸೀದಾ ರಬ್ಬರ್ ತೋಟಕ್ಕೆ ಹೋದೊ. ಸುಮಾರ್ ಮರ ಟೇಪಿಂಗ್ ಆಗಿತ್ತ್. ಕೆಳಗೆ ಕೆಳಗೆ ಹೋದೊ. ಹಂಗೆ ನಿತ್ತ್ ಆಚೀಚೆ ನೋಡಿವೆ... ಎರಡ್ ಮೂರ್ ಕಡೆ ಆನೆ ಲಡ್ಡಿ ಕಂಡಾತ್. ಡೌಟ್ ಬಂದ್ ಇನ್ನು ಸ್ವಲ್ಪ ಕೆಳಗೆ ನೋಡಿವೆ... ಗುರ್ತಾನೆ ಸಿಗದಂಗೆ ಚೆಲ್ ಚೆಲ್ಲಾಗಿ ಶೇಷಪ್ಪಣ್ಣನ ಶರ್‍ರ ಬಿದ್ದಿತ್. ವಿಷಯ ಗೊತ್ತಾಗಿ ಊರಿಗೆ ಊರೇ ಬೆಚ್ಚಿ ಬೀಳ್ತ್. ದಿನ ಬೆಳ್ಳಂಬೆಳಗ್ಗೆ ಟೇಪಿಂಗ್‌ಗೆ ಹೋಗೊವು ಎಲ್ಲ ಪಾರೆಸ್ಟ್‌ನೊವುಕೆ ಶಾಪ ಹಾಕಿದೊ. ಅಮ್ಮಣಿನ ಗೋಳಾಟ ಹೇಳಿಕೆ ಸಾಧ್ಯ ಇಲ್ಲೆ.

ಪ್ರಕಾಶಂಗೆ ಫೋನ್ ಮಾಡಿ ಆತ್, ಫೋನ್ ತೆಗ್ತ್ಲೆ. ರಾತ್ರಿ ಹತ್ತ್ ಗಂಟೆಗೆ ತಿರ್ಗಿಸಿ ಪೋನ್ ಮಾಡ್ತ್. ಹೊರ್ಟ್ ಬರೋವೋತ ಹೇಳಿರೆ ಕೊರೊನ ಮತ್ತೆ ಜಾಸ್ತಿ ಆಗಿ ನೈಟ್ ಕರ್ಫ್ಯೂ...! ಮಾರನೇ ದಿನಂದ ಫುಲ್ ಲಾಕ್‌ಡೌನ್!! ಎಂತ ಮಾಡುದು... ಚೂರ್ ಮರ್ಟ ಪ್ರಕಾಶ ಕೋಳಿಗೈಪುಲಿ ಊಟ ಮಾಡಿ ಮಲ್ಗಿತ್. ಮಾರನೆ ದಿನನೂ ಪೋನ್ ಮಾಡಿ ಚೂರ್ ಮರ್ಟತ್. ಸೊಸೆ ರೆಸ್ಟ್ ಇನ್ ಪೀಸ್ ಅಂತ ಮಾವನ ಪೋಟೊನ ಸ್ಟೇಟಸ್ ಹಾಕಿತ್! ಅಂತೂ ಬೊಜ್ಜದ ದಿನ ಹತ್ರ ಆದ್ರೂ.. ಲಾಕ್ಡೌನ್ ಮುಗಿವಂಗೆ ಕಂಡತ್ಲೆ. ಮಂಜ ಬರುವಂಗೂ ಕಂಡತ್ಲೆ.

ಜಾಸ್ತಿ ಜನ ಸೇರುವಂಗೆ ಇಲ್ಲದ ಕಾರಣ ಕುಟುಂಬದೊವು ಸೇರಿ, ಬೊಜ್ಜದ ಕ್ರಮ ಮಾಡಿ ಮುಗ್ಸಿದೋ....!

---

**ಲೀಲಾಕುಮಾರಿ**
ತೊಡಿಕನ




# ಮೀನ್ ಬ್ಯಾಟೆ

**ಸೂದನ ಈರಪ್ಪ**

ಯಂತನೆ..... ಈ ಕೆಸ ಗೈಪುಲಿ ಹೆಂಗೆ ಉಂಬೊದು, ಸೊಲ್ಪ ಹುಳ್ಳಂಗೆ ಏನಾರ್ ಮಾಡಿಕಾಗದ.....?

ಒಣ್ಗಿಲ್ ಮೀನ್ ಬೆಸೆಗೆಲಿ ಇಲ್ಲೆನಾ..... ಅಸ್ಟ್ ಬೇಗ ತೀರಿಹೋತ...? ನೊಡ್ನೆ ಗುಂಡಿ ಮನೆ ಚೆಣ್ಣಪ್ಪಜ್ಜನ ಮನೆಂದ ಮೀನ್ ಗೈಪುನ ವಾಸನೆ ಮೂಕಿಗೆ ಹೊಡ್ದದೆ..... ಹೋಗಿ..... ಹೊಳೆ ಹಾರಿ ಮೀನ್ ಹಿಡ್ಕಬನ್ನಿ ಯಾಗೊಲು ತಿಂಬಕ್ ಮೀನ್ ಗೈಪು..... ಸೊಂಪನ ಹೆಣ್ಣ್ ಬೋಜಿ ಹಂಗ್‌ಸಿತ್ ಗಂಡಂಗೆ.

ಕಾವೇರಿ ಹೊಳೆಗೆ ಚೆಣ್ಣಪ್ಪಜ್ಜ ವಾರಲಿ ಒಮ್ಮೆ ಆದರೂ ಹೈದಂಗಳ ಕರ್ಕಂಡ್ ಹೋಗಿ ಮೀನ್ ಬ್ಯಾಟೆ ಮಾಡದಿದ್ದರೆ ಅವಂಗೆ ನಿದ್ದೆ ಬಾಕಿಲೆ ಸುಮಾರ್ ಐದಾರ್ ಅಡಿ ಆಳದ ಗುಂಡಿಗ ಚೆಣ್ಣಜ್ಜ ಮತ್ತೆ ಮಕ್ಕ ಹೊಳೆಲಿ

ಇಳ್ದ್ ಮಾಳಿಗೆ ಕಲ್ಲ್ ನೀರ್ ಕೂಡ್ಸಿ ಮಾಳಿಯೊಳಗೆ ಕೈಯಾಕಿ ಮೀನ್ ಹಿಡಿಯೊದರ್‌ಲಿ ನಿಸ್ಸಿಮರ್. ಅದೆಂತದ್ ಮೀನ್‌ತೇಳ್ರೆ ಮೊರ್ಟೆ, ಗೆಂಡೆಗ, ಅರೆಂಞ, ಬೊಡ್ಡತಗ..... ಹೊಳೆನ ಬದಿಲಿರುವ ಮಾಳಿಗೆ ಕಲ್ಕ್ ನೀರ್ ಕೂಡ್ಸುದು ಕೈ ಹಾಕುದು; ಕಲ್ಕ್ ಕೂಡ್‌ಕನ ಮೀನ್ ಮಾಳಿಂದ ಹೊರಗೆ ಬಾಕೆ ನೋಡ್ದೆ; ಆಗ ತಲೆನ ಹಿಡ್ಕಂಬೊದು, ಹಂಗೆ ಚಿಣ್ಣಪ್ಪಜ್ಜನ ಮನೆಲಿ ಪೊಗ್ಗ್ಗಿ ತಿಂಗ್‌ಳ್ಂದ ತೀರುವ ವರೆಗೆ ವಾರಕ್ಕೊಮ್ಮೆ ಮೀನ್ ಗೈಪ್ ಗ್ಯಾರಂಟಿ.

ಚಿಣ್ಣಪ್ಪಜ್ಜನ ಮನೆಂದ ಮೀನ್ ಗೈಪುನ ವಾಸನೆ ಬಾಕನ ಸೋಂಪನ ಬಾಯ್ಲಿ ಜೊಲ್ಲು ಸುರ್ಸಿಕಂಬೊದು, ಹೊಟ್ಟೆನೂ ನೊಡ್ನೆ.... ಇಂದ್ ನಮ್ಮನೆಲಿ ಮೀನ್ ಗೈಪು.... ಆ ಚಿಣ್ಣಪ್ಪಜ್ಜ ಮತ್ತೆ ಹೈದ:ಗಳಿಗೆ, ನಾವು ಗೈಪು ಮಾಡ್ಕನ ಅದರ ವಾಸನೆ ಮೂಕ್‌ನ ಒಳಗೆ ನುಗ್ಗಿ ಹೊಟ್ಟೆ ಕುದಿಯಕು. ಅಪ್ಪಾ ನೀನ್ ಹೊಳೆಗೆ ಮೀನು ಹಿಡಿಯಕ್ಕೆ ಹೊದರೆ ವಾಪಾಸ್ಸ್ ಬಂದಿಯಾ....? ನಿಂಗೆ ಮೀಸಿಕೆ ಗೊತ್ತಾಟಾ..? ಸೊಂಪನ ಮಗ್ಳ್ ಪೊನ್ನಿ ಗೂಡೆ ಅಪ್ಪಂಗೆ ಹಂಗ್‌ಸಿತ್.... ನೋಡು ಕೂಸು, ಚಿಣ್ಣಪ್ಪಜ್ಜ ಮತ್ತೆ ಅವನ ಮಕ್ಕ ಹೊಳೆಲಿ ಮೀನ್ ಹಿಡ್ದರೆ ನಾನ್ ಹೊಳೆಂದ ಮ್ಯಾಲೆ ಬರೆ ಕೊಡಿಲಿ ಕುದ್ದ್‌ಕಂಡೆ ಮೀನ್ ಹಿಡ್ದನೆ, ನೋಡು; ಅದೆಂಗೆ ಅಪ್ಪಾ ಗಾಳ ಹಾಕಿಯ? ನಿಂಗ್ಯಾಕೆನೆ ಗೂಡೆ ಸುಮ್ಮನಿರ್‌ಬಲಾ ಇಂದ್ ಕತ್ತಲೆಗೆ ನಿಂಗೆ ಮೀನ್ ಗೈಪ್.... ಏ ಬೋಜಿ.. ತೆನಿಯಪ್ಪಂಗೆ ಬಾಕನ ಹೇಳಿಬಿಡು; ಇಂದು ಎರ್ಡ್ ಕುಪ್ಪಿ ಜಾಸ್ತಿ ಇರ್ಲಿ ಗಡಿಗೆ ತುಂಬಿ ಸೋರಿರೂ ಅಂವ ನಂಗೆ ಕೊಡ್ದು ಮಾತ್ರ ಬರಿ ಎರ್ಡ್ ಕುಪ್ಪಿ ಮಾತ್ರ....

ಅಪ್ಪಾ...... ಆ ಕಂತರೆ ಗುಂಡಿಲಿ ಬಾಳ ಗೆಂಡೆಗ ಸುತ್ತಾಡ್ತವೊಳೊ... ಇದೇ ಪೋಯಿ ಕೇಳ್ಸಿಕಂಡ; ಕುಂಞ ನೀರ್‌ಗೆ ಇಳಿಯದು ಬ್ಯಾಡ, ಅವಂಗೇ ಸೀತ ಜರ ಕಮ್ಮಿ ಆತ್‌ಲೆ.......ಇವು ಮಾತಾಡ್ದರ ಕದ್ದ್ ಕೇಳ್ದ ಸೋಂಪಂಗೆ ಸೊರ್ಗಕ್ಕೆ ಮೂರೆ ಗೇಣ್........

ಸುಮಾರ್ ಹತ್ತ್ ಹನ್ನೊಂದು ಗಂಟೆ ಹೊತ್ತಿಗೆ ಬಂದೊ ಚಿಣ್ಣಪ್ಪಜ್ಜ ಮತ್ತೆ ಮೂರು ಮಂಞದರ್, ಚೀಲ ಕತ್ತಿನ ತಗಂಡ್ ಅಪ್ಪ ಮಕ್ಕ ಇಳ್ದೊ ಹೊಳೆಗೆ, ಮಾಳಿಗೆ ಕಲ್ಕ್ ನೀರ್ ಕುಡ್ಸುದು ಒಬ್ಬೊಬ್ಬನ ಕೈ ಒಂದೊಂದು, ಮಾಳಿಲಿ, ಅಪ್ಪಾ..... ಅಪ್ಪಾ. ಎಳಿಯಾಕಾಲೆ... ತೋರ ಉಟ್ಟು ಕಂಡದೆ..... ಆಂ. ಆ..... ಎಳ್ದದೆ ಎಳ್ದದೆ ಅರ್ದ ಮಾರ್ ನ ಬರೆ ಮೀನ್ ಅಪ್ಪಣು

ಹೈದ ಹಿಡ್ಕಂಡೊಗಿ ಮಣ್ವಟ್ಟಿ ಮ್ಯಾಲೆ ಹಾಕಿ ತಲೆಗೆ  ನಾಕ್ ಬಡ್ತ್ ಸುಮಾರ್ ಹೊತ್ತ್ ಹಿಡ್ದೊ ಹಿಡ್ದೊ ಮೊರ್ಬೆ ಗೆಂಡೆಗ..... ಮಣ್ಣಟ್ಟಿ ಮ್ಯಾಲೆ ಸುಮಾರ್ ಎರ್ಡ್ ಹಾನಿ ಮೀನ್, ಅಪ್ಪಾ ಆ ಪಾರೆ ಗುಂಡಿಲಿ ನೋಡ್ನ...... ಚೋಮುಣಿ ಹೈದ ಹೇಳ್ತ್ ಪಯ್ಯಲಿ ಗುಂಡಿ ತೆಗ್ದ್ ಮುಚ್ಚು ಅ ಗುಂಡಿ ನೋಡಿ ಬರ್ನೊ ಅಪ್ಪಾ ಹೇಳ್ತ್ ಅವು ಮೀನ್‌ನ ಗುಂಡಿಲಿ ಮುಚ್ಚಿ ಅತ್ತಾ ತಿರ್‍ಗಿದೊ ಹಾ ಹುಳಿ, ಉಪ್ಪು ಖಾರ ಹುಳ್ಳಂಗೆ ಮೀನ್ ಗೈಪು ಒಟ್ಟಿಗೆ ಬೈನೆ ಕಳ್ಳ್ ಸೊಂಪಂಗೆ ಸೊರ್‍ಗಕ್ಕೆ ಮೂರೇ ಗೇಣ್, ನೋಡ್ನೊ ಕಾಲ್ ಕೆಳ್ಗೆ ಹಾಕಿ ಇಳಿಯಕು ಲಟಪಟ ನೆಕ್ಕಿಮರದ ಗೆಲ್ಲ್ ನೊಟ್ಟಿಗೆ ಬಸೊ ಬಿದ್ದರೆ ಹೊಳೆ ನಡುಗೆ...ಪಾಪುರು ತುಂಬಾ ನೀರ್ ಕುಡ್ದುಟ್ಟು ಕಂಡದೆ ಚೋಮುಣಿ ಬೊಯ್ಯುತ್ತಿತ್ತು.

ಯಚ್ಚರ ಅಕನ ಮಣ್ವಟ್ಟಿ ಮ್ಯಾಲೆ ಮಲ್ಗಿತ್ತ್ ಚಿಣ್ಣಪ್ಪ ಹೊಟ್ಟೆನ ಅಮುಕ್‌ತ ಉಟ್ಟು.... ನೀ ಯಾಕೆರಾ ಮರ ಹತ್ತಿದ್... ಕೇಳಿದರೆ ನಾಕ್ ಮೀನ್ ಕೊಡ್ತಿದ್ದೊ ಅಲ್ಲಾ ನಾಚಿಕೆ ಆದ್ಲೆ.

ಮೀನ್ ಕದಿಯಕ್ಕೆ ನೆಕ್ಕಿಮರಲಿ ಅಡ್ಗಿ ಕುದ್ದದ್ ಮುರ್ದ್ ಹೊಳೆಗೆ ಬಿದ್ದ್, ಚಿಣ್ಣಪ್ಪನ ಮಕ್ಕ ಎತ್ತಿ ಹಾಕಿದ್ದ್; ಈ ಸಂಗತಿ ಊರವುಕೆಲ್ಲಾ ರೇಡಿಯೊಲಿ ಪ್ರಸಾರ ಆದಂಗೆ ಗೊತ್ತಾವುಟ್.

ಮಾರ್ನೆ ದಿನಂದ ಮಕ ಎತ್ತಿಕೆ ನಾಚಿಕೆ, ಹೆಣ್ಣ್ ಹೇಳ್ತ್ ನಾಕ್ ದಿನ ಮನೆಂದ ಹೊರಗೆ ಹೊಬಡಿ.... ಮಗ್ಳ್ ಹೇಳ್ತ್ ಅಪ್ಪಾ ಹೊಳೆಲಿ ಗಾಳ ಹಾಕಿಕೆ ನೀನ್ ಹೊಳೆ ಬದಿಲಿ ಕೂರ್ದು ಬುಟ್ಟ್ ನೆಕ್ಕಿ ಮರಲಿ ಹತ್ತಿ ಕುದ್ದದ್ ಯಾಕೆ...?

---

**ಸೂದನ ಈರಪ್ಪ**
ಬಕ್ಕ, ಬೆಟ್ಟಗೇರಿ

# ಬನ್ನಿ ಓದೋಮ

ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವು, ಮಾಸ್ತಿ ಕನ್ನಡದ ಆಸ್ತಿ ಎಂಬ ಹೆಗ್ಗಳಿಕೆಗೆ ಪಾತ್ರರಾದವು. ಕನ್ನಡ ಕತಾಲೋಕಕ್ಕೆ ಅವರ ಕೊಡುಗೆ ಅಪೂರ್ವವಾಗಿಟು. ವಿಶಿಷ್ಟ ಮತ್ತು ವಿಭಿನ್ನ ರೀತಿಯ ಕಥೆಗಳಿಗೆ ಹೆಸರಾದ ಇವು ಸಣ್ಣ ಕತೆಗಳ ಜನಕ ಎಂದೇ ಖ್ಯಾತರಾದವು. ಮಾಸ್ತಿಯವು ಸಾಹಿತ್ಯದ ಎಲ್ಲಾ ಪ್ರಕಾರಗಳ್ಲಿ ಕೈಯಾಡಿಸಿಯೊಳೊ.

ಯಶೋಧರ, ಕಾಳಿದಾಸ, ಕಾಕನಕೋಟೆ, ಶಿವಾಜಿ, ತಿರುಪಾಣಿ, ತಾಳಿಕೋಟೆ, ಪುರಂದರದಾಸ, ಭಟ್ಟರ ಮಗಳು. ಇದಲ್ಲದೆ ಶೇಕ್ಸ್ಪಿಯರ್, ಠಾಕೂರರ ಹಲವು ನಾಟಕಗಳ್ನ ಕೂಡ ಮಾಸ್ತಿ ಕನ್ನಡಕ್ಕೆ ತಂದೊಳೊ.

ಚೆನ್ನಬಸವನಾಯಕ, ಚಿಕ್ಕವೀರರಾಜೇಂದ್ರ, ಸುಬ್ಬಣ್ಣದಂತಹ ಕಾದಂಬರಿಗಳ್ನ, ಖಂಡ ಕಾವ್ಯ, ಆತ್ಮಚರಿತ್ರೆ, ಜೀವನ ಚರಿತ್ರೆಗಳ್ನ ಬರ್ದೊಳೊ.

ಕನ್ನಡ ಸಾಹಿತ್ಯಲಿ ಕಥಾ ಪ್ರಕಾರಕ್ಕೆ ಹೊಸ ಆಯಾಮ ನೀಡ್ದ ಮೊನ್ಸನ ಒಳ ಜಗತ್ತಿನ ಶೋಧಕ ಇವು.

ಮಾಸ್ತಿ ಅವು ಕೇವಲ ಕವಿಯಲ್ಲ, ಬೊದ್ಕಿ ಸಂಸ್ಕೃತಿನ ಮೈಗೂಡಿಸಿಕಂಡ್ ಪಕ್ವತೆ ಪಡ್ಕಂಬೊದು ಹೇಂಗೆ ತೇಳುದರ್ನ ಅವು ತಮ್ಮ ಕೃತಿಗಳ ಮೂಲಕ ತೋರಿಸಿಕೊಟ್ಟವು. ತಮ್ಮ ಕಥೆ ಮತ್ತೆ ಕಾದಂಬರಿಗಳ ಮೂಲಕ ತಮ್ಮ ಅನ್ವೇಷಣೆಗಳ್ನ ಓದುಗರಿಗೆ ತಿಳಿಯ ಹೇಳಿದವು. ಮೊನ್ಸನ ಒಳಗೆ ಅಂಡ್ಗಿರುವ ಭಾವನೆಗಳನ್ನ ಹೊರಗೆ ತೆಗೆದವು. ಅವ್ಕೆ ಕತಾ ಪಾತ್ರ ಮುಖ್ಯ ಅಲ್ಲ,ಅದರ ಮನಸ್ಥಿತಿ ಮುಖ್ಯ ಆದೆ. ಘಟನೆಗಿಂತ ಅದರ ಹಿಂದಿನ ಕಾರಣ ಮುಖ್ಯ ಆದೆ.

ಕನ್ನಡ ಸಾರಸ್ವತ ಮಕುಟಕ್ಕೆ ಜ್ಞಾನಪೀಠದ ಮತ್ತೊಂದು ಗರಿತೊಡಿಸಿದ ಮಾಸ್ತಿ ಅವರ್ನ ಇಂದಿನ ಪೀಳಿಗೆಯವು "ಮಾಸ್ತಿ ಕನ್ನಡದ ಆಸ್ತಿ" ತೇಳಿ ಕರ್ದ್ ಸುಮ್ಮಂಗಾಗಿ ಬುಟ್ಟವೆ. ಆದರೆ, ಮಾಸ್ತಿ ಕನ್ನಡದ ಆಸ್ತಿ ಅಂತ ಕರ್ಸಿಕಂಡದ್ದ್, ಕೇವಲ ಅವರ ಸಾಹಿತ್ಯ ಕೃಷಿಯಿಂದಲ್ಲ. ಕನ್ನಡ ಮನಸ್ಸುಗಳ್ನ ಪೋಷಿಸಿ, ಬೊದ್ಕಿನ ಮಹತ್ವನ, ಕನ್ನಡದ ಅಸ್ತಿತ್ವದ ಹಿರಿಮೆಯನ್ನ ಸಾರ್ದರ್‌ಂದ.

ಇಂದ್ ಮಾಸ್ತಿ ನಮ್ಮ ಮುಂದೆ ಇಲ್ಲೆ . ಆದರೆ ಅವರ ಬೊದ್ಕ್- ಬರಹ ಸಾಸ್ವತ ಆಗಿ ಉಟ್ಟು. ಮಾಸ್ತಿಯವರ ಕತೆಗಳ್ನ ನಾವು ಓದೋಕು ಮತ್ತೆ ಅಂತದೇ ಕತೆಗ ಅರೆಬಾಸೆಲಿ ಕೂಡ ಬರೋಕು ತೇಳುವ ದೃಷ್ಟಿಂದ ಅವರ ಸಣ್ಣಕತೆಗಳ್ಲಿ ಒಂದಾದ 'ಶ್ರೀ ಕೃಷ್ಣನ ಅಂತಿಮ ಸಂದರ್ಶನ' ಕತೆನ ಒಂದು ತುಣುಕುನ ನಿಮ್ಮ ಮುಂದೆ ಇಡ್ತೊಳೊ.

## ಶ್ರೀಕೃಷ್ಣನ ಅಂತಿಮ ಸಂದರ್ಶನ

ಶ್ರೀಕೃಷ್ಣನ ಸಂಸಾರದ ತರುಣರು ಯಾವುದೋ ಹುಡುಕಾಟದಲ್ಲಿ ಮಾತು ತಪ್ಪಿ ಜಗಳ ಬೆಳೆದು ಒಬ್ಬರನ್ನೊಬ್ಬರು ಕೊಂದು ಮುಗಿಸಿದರು ಎನ್ನುವ ಸುದ್ದಿ ಕೆಲವು ದಿನಗಳ ಮೇಲೆ ಹಸ್ತಿನಾಪುರವನ್ನು ಸೇರಿತು. ತನ್ನ ಮನೆತನದ ರಕ್ಷಕನಾದ ಸಜ್ಜನ ಶ್ರೀಕೃಷ್ಣನ ಪರಂಪರೆಯಲ್ಲಿ ಇಂಥ ದುರಂಥ ನಡೆಯಿತೇ ಎಂದು ಯುಧಿಷ್ಠಿರನಿಗೆ ದುರ್ಭರ ದುಃಖ, ಜೊತೆಗೆ ಆಶ್ಚರ್ಯವೋ ಆಶ್ಚರ್ಯ. ಅಂಥ ಗುಣಶಾಲಿಯ ಸಂತಾನ, ಪರಂಪರೆ, ಇಂಥ ಅವಿವೇಕವನ್ನು ನಡೆಸಿತೇ? ಇದು ಆಯಿತು ಎಂತು? ಎಂತು ಏನು? ಕೃಷ್ಣ ಸಜ್ಜನನೇ; ಅವನ ಅಣ್ಣ ಬಹುಪಾಲು ತಮ್ಮನಂತೆ ಸಜ್ಜನನಾಗಿದ್ದರೂ ಸ್ವಲ್ಪ ರಾಜಸವನ್ನು ಬೆಳೆಸಿಕೊಂಡಿದ್ದನು; ಮದ್ಯದ ಸವಿಗೆ ಮನಸೋತಿದ್ದನು. ಮನೆಯ ಮಕ್ಕಳು ಈ ದೊಡ್ಡಪ್ಪನಂತೆ ಬೆಳೆದರು. ಕೃಷ್ಣ ಮಹಾಪುರುಷ ಎಂದು ಗಳಿಸಿದ್ದ ಕೀರ್ತಿ ಇವರಿಗೆ ಒಂದು ರೀತಿಯ ರಕ್ಷೆ ಆಗಿ ಜನ ಇವರನ್ನು ಪ್ರಕಟವಾಗಿ ದೂರದಂತೆ ಮಾಡಿತ್ತು. ಅಣ್ಣನ ಚಾಳಿ, ತಮ್ಮನ ಸಜ್ಜನಿಕೆ, ಹುಡುಗರನ್ನು ಕೆಡಿಸಿದುವು. ಎಳೆಯರು ವಯಸ್ಸಿನಲ್ಲಿ ಬೆಳೆದರು; ಸ್ವಭಾವದಲ್ಲಿ ಹುಡುಗರಾಗಿಯೇ ಉಳಿದರು. ವಿಧಿ ನಿಯಮಿಸಿದ ಹೊತ್ತಿನಲ್ಲಿ ಈ ಸ್ಥಿತಿಯ ಫಲವಾಗಿ ತಮ್ಮ ಚರಿತವನ್ನು ಹೀಗೆ ತಾವೇ ಮುಗಿಸಿಕೊಂಡರು.

'ನಿನ್ನ ಸಂಸಾರದಲ್ಲಿ ಈ ಸಂಗತಿ ನಡೆದು ದುಃಖ ಪಡುವುದಾಯಿತೇ' ಎಂದು ವಯಸ್ಸಿನಲ್ಲಿ ಹಿರಿಯನಾದ ತಾನು ಈ ಮಹನೀಯ ಮಿತ್ರನಿಗೆ ಸಮಾಧಾನ ಹೇಳಬೇಕು. ಹೀಗೆಂದು ತೋರಿ, ಯುಧಿಷ್ಠಿರ ಕೃಷ್ಣನನ್ನು ಕಾಣಲು ನಿಶ್ಚಯಿಸಿ ಒಡನೆಯೆ ಮನಸ್ಸನ್ನು ತಡೆದನು. 'ಹೋದೆ, ಕೃಷ್ಣನಿಗೆ ನಾನು ಹೇಳಬಹುದಾದ ಮಾತು ಏನು?' ಎಷ್ಟು ಯೋಚಿಸಿದರೂ ಅವನಿಗೆ ಇದು ಸ್ಪಷ್ಟವಾಗಿ ಹೊಳೆಯಲಿಲ್ಲ. ಕೃಷ್ಣ ಮಹಾಜ್ಞಾನಿಗಳಲ್ಲಿ ಮಹಾಜ್ಞಾನಿ. ತನ್ನ ಅಜ್ಜ ವ್ಯಾಸಮಹರ್ಷಿ ಅವನನ್ನು ದೇವರ ಅವತಾರ ಎಂದು ಹೊಗಳಿದ್ದನು.

ಒಬ್ಬ ಋಷಿಯಿಂದ ಇಂಥ ಹೊಗಳಿಕೆಯನ್ನು ಗಳಿಸಿದ ಗೆಳೆಯನಿಗೆ ತಾನು ಹೇಳಬಹುದಾದ ಮಾತು ಏನು ಉಳಿದೀತು? ಮಾತು ಬೇಡ. ಹೋಗಿ ಕಂಡು ಮೌನವಾಗಿಯೇ ಜೊತೆಯಲ್ಲಿ ಕುಳಿತರೆ ಗೆಳೆಯನಿಗೆ ಸ್ವಲ್ಪ ಸಮಾಧಾನ ಆಗಬಹುದು. ಹೀಗೆಂದುಕೊಳ್ಳುತ್ತ ಈ ಗೆಳೆಯ ಒಂದೆರಡು ತಿಂಗಳನ್ನೇ ಕಳೆದನು.

ಈ ವಿಷಯದಲ್ಲೇ ನಿರತವಾಗಿ ಬಗೆ ಬಗೆಯ ಚಿಂತೆ ಮಾಡುತ್ತಿದ್ದ ಇವನಿಗೆ ಒಂದು ರಾತ್ರಿ ಸ್ವಪ್ನದಲ್ಲಿ ಕೃಷ್ಣ ಬಂದು, "ಹಿರಿಯಣ್ಣ, ನಾನು ಹೊರಡುತ್ತೇನಪ್ಪಾ," ಎಂದು ಹೇಳಿದಂತೆ ಆಯಿತು. ನಿದ್ದೆ ತಿಳಿದು ಇವನಿಗೆ 'ಏಕೆ ಈ ಸ್ವಪ್ನ? ಇದಕ್ಕೇನಾದರೂ ಅರ್ಥ ಇದೆಯೆ?' ಎಂದು ಮನಸ್ಸಿನಲ್ಲಿ ಪ್ರಶ್ನೆ ಮೂಡಿತು. 'ಕೃಷ್ಣ ಹೊರಡುತ್ತೇನೆ ಎಂದು ಹೇಳಿದನಲ್ಲ, ಈ ಮಾತಿನ ಅರ್ಥ ಏನು? ಮಕ್ಕಳೆಲ್ಲ ಸತ್ತರು, ನಾನು ಇನ್ನು ಇರಲಾರೆ, ಎಂದು ವಯಸ್ಸಿನಿಂದ ಕಿರಿಯನಾದ ಈ ಮಹಾಮಹಿಮ ಸ್ವಪ್ನದಲ್ಲಿ ಇದನ್ನು ತಿಳಿಸಿದನೋ? ಎಂದರೆ, ಕೃಷ್ಣ....' ಹಿರಿಯನ ಮನಸ್ಸು ಮುಂದಿನ ಮಾತನ್ನು ನೆನೆಯಲು ಒಪ್ಪಲಿಲ್ಲ.

ಈ ಯೋಚನೆಯ್ಲುಲಿ ಮುಳುಗಿ ಈ ಅಣ್ಣ ಕುಳಿತಿರುವಾಗ, ತಮ್ಮ ಅರ್ಜುನ ಏನನ್ನೋ ಹೇಳಲೆಂದೋ, ಕೇಳಲೆಂದೋ, ಇವನ ಬಳಿಗೆ ಬಂದನು. ಕೃಷ್ಣನ ಸಂಸಾರದ ದುರಂತ ಹಿರಿಯನ ಮನಸ್ಸನ್ನು ಕಲಕಿದ್ದಂತೆ ಕಿರಿಯರು ಇವರೆಲ್ಲರ ಮನಸ್ಸನ್ನೂ ಕಲಕಿತ್ತು.

ಎಲ್ಲರೂ ಕೃಷ್ಣನ ಬಳಿಗೆ ಹೋಗಬೇಕು ಎಂದುಕೊಂಡವರೇ. ಎಲ್ಲರೂ ಮನೆಯ ಹಿರಿಯನಂತೆ ಹಿಂತೆಗೆದವರೇ. ಬಳಿಗೆ ಬಂದು ಅರ್ಜುನ ಅಣ್ಣ ಖಿನ್ನನಾಗಿರುವುದನ್ನು ಗಮನಿಸಿದನು. ಈ ಕಾರಣದಿಂದ ತನು ಹೇಳಲೆಂದೋ ಕೇಳಲೆಂದೋ ಬಂದಿದ್ದ ಆ ಸಂಗತಿಯನ್ನು ಹೇಳದೆ ಸುಮ್ಮನೆ ನಿಂತನು.

ಬಳಿಗೆ ಬಂದ ತಮ್ಮನನ್ನು ನೋಡಿ ಯುಧಿಷ್ಠಿರ ಚಿಂತೆಯಿಂದ ಹೊರಕ್ಕೆ ಬಂದನು. ತಮ್ಮನಿಗೆ, "ಬಾ ತಮ್ಮಾಜಿ, ಕುಳಿತುಕೋ", ಎಂದನು. ಅರ್ಜುನ ಬಳಿಯ ಪೀಠದಲ್ಲಿ ಕುಳಿತನು. ಅಣ್ಣ ಏನಾದರೂ ಹೇಳುವನೋ ಎಂದು ಒಂದು ಕ್ಷಣ ಸುಮ್ಮನಿದ್ದು ಅವನು ಏನೂ

ಹೇಳಲಿಲ್ಲವಾದ್ದರಿಂತ ತಾನೇ "ಏನಣ್ಣ ಮನಸ್ಸಿಗೆ ಕಷ್ಟ ಆದಂತಿದೆ" ಎಂದನು.

ಯುಧಿಷ್ಠಿರ ಸ್ವಪ್ನದಲ್ಲಿ ಕೃಷ್ಣ ಕಂಡ ಸಂಗತಿಯನ್ನು ಹೇಳಿದನು. ಮಕ್ಕಳನ್ನು ಕಳೆದುಕೊಂಡು ಬಡಪಾಯಿ ಎಷ್ಟು ದುಃಖಿಸುತ್ತಿದ್ದಾನೋ ಅಂತ ಅದೇ ಯೋಚನೆ ಮಾಡುತ್ತಾ ಇದ್ದೆನಲ್ಲ, ಅದರಿಂದ ಸ್ವಪ್ನ ಆಗಿರಬೇಕು ಅಂದುಕೊಂಡೆ. ಹೊರಡುತ್ತೇನೆ ಅಂದನಲ್ಲಾ ಅದು ಯಾಕೋ ಕೆಟ್ಟ ಮಾತು ಆಯಿತು ಅನ್ನಿಸುತ್ತಾ ಇದೆ. ಕನಸುಗಳು ಕೆಲವು ವೇಳೆ ಮುಂದೆ ಆಗೋ ಸಂಗತೀನ ತಿಳಿಸೋದು ಉಂಟಲ್ಲಾ, ಇದು ಅಂಥ ಸಂಗತಿಯೇನೊ ಅಂತ ಸ್ವಲ್ಪ ಕಳವಳ ಆಗುತಿದೆ.

ಅರ್ಜುನನಿಗೆ ಅಣ್ಣನ ಶಂಕೆ ಸರಿ ಎಂದು ಕಂಡಿತು. ಅವನು, "ಸರಿಯೇ ಅಣ್ಣ, ಕೃಷ್ಣ ನಿನಗೆ ದೂರದಿಂದಲೇ ಮನಸ್ಸನ್ನು ತಿಳಿಸಬಲ್ಲವನೂ ಹೌದು. ಅಜ್ಜ ಹೇಳತಾರಲ್ಲ ಅವನು ಮಹಾಯೋಗಿ, ಪವಾಡಗಳನ್ನು ಮಾಡಬಲ್ಲವನು ಅಂತ; ಇದು ಅಂಥ ಒಂದು ಸಂದರ್ಭ ಇರಬಹುದು. ಸುದ್ದಿ ಬಂದಾಗಲೇ ನಾವು ಯಾರಾದರೂ ಹೋಗಬೇಕಾಗಿತ್ತು. ಈಗ ನಾ ಹೋಗಿ ಬರಲೇನು?" ಎಂದನು.

ಅಣ್ಣನಿಗೆ ಈ ಸಲಹೆ ರುಚಿಸಿತು. "ಹೌದು ತಮ್ಮಾಜಿ. ದಿಟದಲ್ಲಿ ನಾನೇ ಹೋಗಬೇಕು. ಆದರೂ ನೀ ಹೋಗೋದು ಒಳ್ಳೇದು. ಸಮಾಧಾನ ಹೇಳೋಕೆ ನಾನು ಯೋಚನೆ ಮಾಡಬೇಕಾಗುತ್ತದೆ. ನಿನಗೆ ಆ ಕಷ್ಟ ಇಲ್ಲ. ತುಂಬ ಅಕ್ಕರೆ ಮನುಷ್ಯನಾದರೂ ನಾನು ಕೃಷ್ಣನೊಂದಿಗೆ ಸಲಿಗೆಯಾಗಿ ಮಾತನಾಡಲಾರೆ.

ಅರ್ಜುನ ಎದ್ದನು. "ಒಂದು ಗಳಿಗೆಯಲ್ಲಿ ಹೊರಡುತ್ತೇನೆ. ರಥದಲ್ಲಿ ಹೋದರೆ ತಡ ಆಗುತ್ತದೆ. ಕುದುರೆ ಏರಿ ಹೋಗಿ ತಿಂಗಳೊಳಗೆ ಬರುತ್ತೇನೆ," ಎಂದು ಅಣ್ಣನ ಕಾಲನ್ನು ಮುಟ್ಟಿ ನಮಸ್ಕಾರ ಮಾಡಿ ನಿಂತನು. ಅಣ್ಣ "ಹಾಗೇ ಮಾಡಪ್ಪ. ಕೃಷ್ಣನ ಸಂಕಲ್ಪ ಏನಿದೆಯೋ ಅದು ಆಗುತ್ತದೆ. ಆಗಲಿ. ಹೋಗಿ ಬರುವವರೆಗೆ ನಾನು ಸಮಾಧಾನವಾಗಿರುತ್ತೇನೆ" ಎಂದನು.

# ಕೋಳಿದ್ ಆಯಿಸ್ ಎಸ್ಟ್ ಗಡ

ಇಂವ ಕೇಳ್ತ್ ಹೆಂಣ್ನ ಕೋಳಿನ ಆಯ್ಯುಷ್ತೆಸ್ವ್ತ
ಇವ್ಳು ಹೇಳ್ತ್ ನೆಂಟ್ರ್ಗ ಬಾಕೆ ಮುಟ್ಟ ತ
ಕೆದ್ಕಿ ಕೆದ್ಕಿ ನಿಂಗೆ ಕೊಟ್ಟೆ
ಕೊಕ್ಕಿ ಕೊಕ್ಕಿ ಕುಕ್ಕುಟ ನಾನಾದೆ
ಕುಕ್ಕಿ ಕುಕ್ಕಿ ಸತ್ತತ್ ಹೂಂಜ
ಹಾಕಿತ್ ಹ್ಯಾಂಟೆ ದಿನಕ್ಕೊಂದು ಮೊಟ್ಟೆ
ಹತ್ತ್ ಹ್ಯಾಂಟೆಗೆ ನೂರು ಪಡೆಲಾಕಿಗ
ಹೇಳ್ತ್ ಹೂಂಜ ಅವುಕ್ಕೆಲ್ಲಾ ನಾನೇ ರಾಜ ತ
ಹೂಂಜನ ಕಳ್ಸಿದ ಕೋಳಿ ಕಟ್ಟ್‌ಗೆ
ಹ್ಯಾಂಟೆನ ಮುಚ್ಚಿದೊ ಹಾಕಿಕೆ ಮೊಟ್ಟೆ
ಹಾಕಿತ್ ಮೊಟ್ಟೆ ಒಂದೊಂದ್ತ್ತೇಳಿ ಇಪ್ಪತ್ತೊಂದ್
ಹ್ಯಾಂಟೆ ಕುದ್ದತ್ ಪುಕ್ಕಅಗ್ಲಿಸಿ ವಾಟೆ ಪಚ್ಚೇಲಿ
ಹ್ಯಾಂಟೆ ಕುದ್ದತ್ ಮಸ್‌ಗದೆ ಇಪ್ಪತ್ತೊಂದ್ ದಿನ

ಪಿಳ್ಳೆಗ ಚಿಲಿಪಿಲಿತ್ತೇಳ್ಕ್ನ, ಗ್ಯಾನಾತ್ ಹೂಂಜನ
ಯಾರ್ ಸ ಇಲ್ಲೆ ಕೂಂಗಿಕೆ ಇಂದ್,
ಹ್ಯಾಂಟೆ ಹೇಳ್ತ್, ಮಕ್ಕಳೆ, ನೀವ್ ಕೂಂಗಕು ಮುಂದೆ
ಇವ್ಳು ಹೇಳ್ತ್, ಬನ್ನಿ, ನೆಂಟ್ರ್ಗ ಬಂದ್ ಕುದ್ದೋಳೊತ
ಇಂವ ಹೇಳ್ತ್, ಬರ್ಲಿ, ಹ್ಯಾಂಟೆ ಉಟ್ಟಲತ
ಇಂವ ಕೇಳ್ತ್ ಕೋಳಿನ ಆಯಿಸ್ ಗೊತ್ತಾತ ತ
ಇವ್ಳು ಹೇಳ್ತ್, ನಿಮ್ಮೊಟ್ಟಿಗೆ ನಂಗೆ ಬೊತ್ತಪ ತ
ಗೊತ್ತಾತ ಕೋಳಿ ಸಾಂಕೊವುಕೆ ಹೆಂಗೆತ್ತೇಳಿ
ಹೆಂಗುಟ್ಟು ನಂಮವರ ಕೋಳಿ ಸಂಸಾರ

**ಪಟ್ಟದ ಪ್ರಭಾಕರ್**
ಅವಂದೂರು
94490 35449

# ಪದ್ಮಂಗೆ ಸೀರೆ ಮೇಲೆ ಆಸೆ

ಪಕ್ಕದ ಮನೆನ ಪದ್ಮಂಗೆ ಸೀರೆಗ । ಎಷ್ಟಿದ್ದರು ಅದ್‌ಬೇಕು ।
ತಿಂಗಳಿಗೊಂದೊ ಎರಡೊ ಸೀರೆನ । ಗಂಡ ತಂದ್ ಕೊಡಕು ॥
ಈಗಾಗಲೆ ಸೀರೆಗ ಪದ್ಮನ ಹಕ್ಕಲೆ । ನೂರ್‌ರ್‌ಂದ ಮೇಲೆ ಉಟ್ಟು ।
ಆದರು ಗಂಡಂಗೆ ಸೀರೆ ಬೇಕುಂತ । ಪ್ರತಿದಿನ ಹೇಳುತ ಉಟ್ಟು ॥

ಮೊದುವಾದ ಸುರ್‌ಗೆನೆ ಹೇಳಿಟು ಗಂಡಂಗೆ । ನಾ ಕೇಳ್ದ್ ಸೀರೆ ನಿಕೊಡೊಕು ।
ಒಪ್ಪಿಟು ಆಗ ಗಂಡನು ಕೂಡ । ಅಂವಂಗೆ ಮನೆಲಿ ನೆಮ್ಮದಿಸಿಕೊಕು ॥
ಪದ್ಮನ ಸೀರೆಗ ಕೊಂಬರೆ ತುಂಬ । ಎಲ್ಲಿ ನೋಡಿರು ಕಾಣುತ ಉಟ್ಟು ।
ಆದರು ಅವಳಿಗೆ ಸೀರೆ ಮೇಲೆ ಆಶೆ । ಅವಳ ಮೈಮೇಲೆ ಏನೋ ಸೇರಿಟ್ಟು ॥

ಪದ್ಮ ಮನೆಲಿ ಉಡುವ ಸೀರೆಗ । ಲೆಕ್ಕ ಮಾಡಿರೆ, ಆರೊ ಏಳದ್ ಅಸ್ಟೆ ।
ಅದರ್‌ಂದ ಹೆಚ್ಚಿಗೆ ಮುಟ್ಟಿಕಿಲೆ ಸೀರೆಗ । ಪದ್ಮ ಉಡುದುನು ಇಸ್ಟೆ ॥
ಮಿಕ್ಕಿದ ಸೀರೆಗ ಇನ್ನೆಸ್ಟೊ ಅದ್ । ಕೊಂಬರೆಲುಟ್ಟು ಅಲ್ಲೆ ।
ಇನ್ನುನು ಸೀರೆಗಳ ತಾ ಕೇಳುತ ಉಟ್ಟು । ಎಂತಕೆ ನಂಗೊತ್ತ್‌ಲ್ಲೆ ॥

ಗಂಡಂಗೆ ಮನೆಲಿ ನೆಮ್ಮದಿ ಬೇಕು । ಅದಕಾಗಿ ಸೀರೆ ಕೊಡ್ತು ।
ಸೀರೆನ ಸರಿಯಾಗಿ ನೋಡಿದ್ ಪದ್ಮ । ಕೋಣೆಲಿ ಅಟ್ಟಿ ಇಸುದು ॥
ಇಪ್ಪತ್ತ್ ವರ್ಷ ಆಗಿತಾಗ । ಮೊದುವೆ ಆಗಿದ್ ಅವುಕೆ ।
ಇಪ್ಪತ್ ಸಾವಿರ ಬೆಲೆ ಸೀರೆ ಕೊಟ್ಟರು । ಮುಕ್ತ್‌ಲೆ ಸೀರೆದ್ ಬಯಕೆ ॥

ತಾನೂ ಉಡುದುಲೆ ಅಕ್ಕತಂಗೆಗೆ । ಅಲ್ಲ ಅವಳವ್ವಂಗೆ ಕೂಡ ಕೊಡಿಕಿಲ್ಲೆ।
ಮನೆ ಎದ್‌ರ್‌ಗೆ ಬೇಡವ ಬಂದರು ಕೂಡಾ । ದಾನ ಮಾಡ್ದೆ ಇಲ್ಲೆ ॥
ವರ್ಷಕೆ ಒಂದೊ ಎರಡೊ ಸರ್ತಿ । ಗಂಡನೊಟ್ಟಿಗೆ ಪೇಟೆಗೆ ಹೋದು ।
ಜರಿಸೀರೆಗ ಅವಳಿಗೆ ಬೇಕಾದಸ್ಟ್ । ಬಾಕನ ಅಂಗ್‌ಡಿಂದ ತಾದು ॥

ಒಂದಿನ ದೀಪಾವಳಿ ಹಬ್ಬಕೆ ಗಂಡ । ಮನೆಗೆ ಪಟಾಕಿ ತಂದಿತ್ತ್ ।
ಪದ್ಮನ ಕೊಂಬರೆ ಮೂಲೆಲಿ ಪಟಾಕಿ । ಅಂಗಡಿಂದ ತಂದ್ ಮೊಡ್ಗಿತ್ತ್ ॥
ಪದ್ಮನೆ ದೇವುರಿಗೆ ದೀಪ ಹೊತ್ತಿಸಿಕೆ । ಕೊಂಬರೆ ಒಳಗೆ ಹೋಗಿತ್ತ್ ।
ಬೆಂಕಿಗೆ ಕಡ್ಡಿ ಗೀರಿದ ರಭಸಕೆ । ಹೊತ್ತಿದ ಕಡ್ಯದ್ ಬಿದ್ದೋತ್ ॥

ಕೋಣೆನ ಮೂಲೆಲಿ ಪಟಾಕಿ ಇತ್ತ್ । ಅದರ ಮೇಲೆ ಕಡ್ಡಿ ಬಿದೋತ್ ।
ಪಟಾಕಿಗೆ ಕಿಚ್ಚಿ ಹಿಡ್ದ್‌ದ್ ಅಯ್ಯೋ ಪಟಾಕಿ ಎಲ್ಲನು ಸುಟ್ಟೋತ್ ॥
ಪಾಪ ಪದ್ಮನ ಸೀರೆನ ರಾಶಿಗೆ । ಪಟಾಕಿಂದ ಕಿಚ್ಚಿ ಹಿಡ್ದೋತ್ ।
ಕೊಂಬರೆಲಟ್ಟಿದ್ ಇಸಿದಾ ಸೀರೆಗ । ಎಲ್ಲನು ಕರಿಕರಿ ಬೂದ್ಯಾತ್ ॥

ಹೊರಗೆಲ್ಲಿಗೊ ಹೋದ ಗಂಡನು ಕೂಡಾ । ಅಸ್ಪೊತ್ತಿಗೆ ಅಲ್ಲಿಗೆ ಬಾತ್ ।
ಅವ ಬಂದಾಕನ ಸೀರೆಗ ಇಲ್ಲದೆ । ಬರಿಕರಿ ಬೂದಿನೆ ಮಾತ್ರ ಅಲ್ಲಿತ್ತ್ ॥
ಪದ್ಮನ ಸಂಕಟ ಆ ಮನ್ಸ್‌ನ ಬೇಜಾರ । ಬೇರೆವ್ಕೊ ಹೇಂಗೆ ಗೊತ್ತ್ ।
ಕರಿಸೀರೆನ ಪಕ್ಕಲೆ ಕೆಳೆಗೆ ಬಿದ್ದ್‌ದ್ । ಹೊರಳಾಡಿಕಂಡ್ ಅತ್ತತ್ ॥

ಪದ್ಮಂಗೆ ಇದ್ದ ಸೀರೆನ ಬಯಕೆಗ । ಆಗಳೆ ಬುಟ್ಟೋತ್ ।
ಉಟ್ಟ ಸೀರೆ ಒಂದೆ ಪುಣ್ಯಕೆ ಅವಳ । ಮೈಮೇಲೆ ಒಳ್ದೋತ್ ।
ಗಂಡಂಗೆ ಹೇಳಿದ್ ಒಂದೆರಡ್ ಸೀರೆ । ಆಗಳೆ ತರ್ಸಿತ್ತ್ ।
ಇನ್ನ್ ಸಾಯುವ ವರೆಗೆ ಸೀರೆಗೆ ಆಸೆನ । ಪಡ್ದುಲೆ ತೇಳಿತ್ತ್ ॥

ಅತಿ ಆಸೆ ಗತಿ ಗೇಡ್‌ಂತೇಳುವ ಈ । ಗಾದೆನ ಈ ಮಾತ್ ।
ಪದ್ಮನ ಸೀರೆನ ವಿಷಯಲಿ ಅದ್ । ಕಂಡಿತ ನಿಜ ಆತ್ ॥
ಎಲ್ಲದರು ಮಿತ ಹಿತ ಇರ್ಲಿಂತೇಳುವ । ಮಾತುನು ಅರ್ಥಾತ್ ।
ಅತೀ ಆಶೆ ಪಟ್ಟ್‌ದ್ ಗಳಿಸಿದ್ ಇಂದ್ । ಎಲ್ಲನು ವ್ಯರ್ಥಾತ್ ॥

**ಭವಾನಿಶಂಕರ್ ಹೊದ್ದೆಟ್ಟಿ**

# ನಮ್ಮ ಅರೆಬಾಸೆ

(ದೋಣಿ ಸಾಗಲಿ ಮುಂದೆ ಹೋಗಲಿ ಧಾಟಿಲಿ ಹಾಡೊಕು)

ಬಾರಿ ಪೋರ್ಲುನ ನಮ್ಮ ಬಾಸೆನ
ಮಾತ್ ಆಡಿ ಬೆಳೆಸೊನ
ಮಕ್ಕ ಮೊರಿಗಳ ಒಟ್ಟಿಗೆಲ್ಲ
ಅರೆಬಾಸೆ ಮಾತಾಡೊನ

ಅರೆಬಾಸೆಲಿ ಮಾತ್ ಆಡಿರೆ ಆವ ಕುಸಿನ ನೋಡಿಯ
ಬಾಸೆನೊಟ್ಟಿಗೆ ನಮ್ಮ ಸಂಸ್ಕೃತಿ ಗಟ್ಟಿ ಆದೊರ ನೊಡಿಯ
ನಾವೇ ಬಾಸೆ ಮಾತಾಡದಿದ್ದರೆ ಇನ್ನ್ ಯಾರ್ ಮಾತಾಡ್ವಯ
ಮನೆಲಿ ಮಾರ್ಗಲಿ ಅಲ್ಲಿ ಇಲ್ಲಿ ನಮ್ಮ ಬಾಸೆನೆ ಇರ್ಲಿಯ ॥ಬಾರಿ ಪೋರ್ಲುನ॥

ನಮ್ಮ ಬಾಸೆ ಆರೆಬಾಸೆ ಮಾತ್ ಆಡಿಕೆ ಸುಲಬಯ
ಹೋಗುತ್ತೇನೆ ಹೋನೆ ಆದರೆ ಬರುತ್ತೇನೆ ಬನ್ನೆಯ
ಕುಳಿತುಕೊಳ್ಳುತ್ತೇನೆ ತೇಳ್ದಕ್ಕೆ ಕುದ್ದನೆ ತೇಳ್ರೆ ಸಾಕ್'ಯ
ನಮ್ಮ ಬಾಸೆಲಿ ಸಮಯ ಒಳ್ದದೆ ಹೆಚ್ಚಿಗೆಚ್ಚಿಗೆ ದುಡೆಕುಯ ॥ಬಾರಿ ಪೋರ್ಲುನ॥

ಸೋಕುನ ಈ ಅರೆಬಾಸೆಗೆ ಜಾತಿನ ಕಟ್ಟಿಲ್ಲೆಯ
ಕೊಡವ ಬಟ್ಟ ಬ್ಯಾರಿ ಪುರ್ಬು ಹೀಂಗೆಲ್ಲವೂ ಮಾತಾಡ್ವೆಯ
ಇಂದ್ ನಮ್ಮ ಈ ಬಾಸೆಗೊಂದು ಅಕಾಡೆಮಿನೆ ಬಂದುಟ್ಟುಯ
ನಾವು ಎಲ್ಲವು ಅರೆಬಾಸೆಲಿ ಓದಿ ಬರೆದೊರ ಮಾಡೊಮುಯ
॥ಬಾರಿ ಪೋರ್ಲುನ॥

**ಸೀತಾರಾಮ ಕೇವಳ**
9448725813

# ನಾಡಹಬ್ಬ ದಸರಾ!

ಶ್ರೀಮತಿ ಶಿವದೇವಿ ಅವನೀಶಚಂದ್ರ

ಹಬ್ಬ ಹಬ್ಬ ಎಲ್ಲರಿಗೂ
ಖುಷಿನ ತರುವ ಹಬ್ಬ,
ಇದ್ ನಮ್ಮ ನಾಡ್‌ನ
ಸಂಭ್ರಮದ ಹಬ್ಬ....

ದುರ್ಗಾಮಾತೆನ ಬೇರೆ ಬೇರೆ
ರೂಪಲಿ ಪೂಜಿಸ್‌ವ
ನಾಡ ಜನರ ಹಬ್ಬ!
ಇದ್ ಜನಸಾಮಾನ್ಯರ ಹಬ್ಬ!

ಮನೆಮನೆಗಳ್‌ಲಿ ನವರಾತ್ರಿ
ಗೊಂಬೆಗಳ ಪೊರ್ಲುಲಿ
ಕುದ್ರಿಸಿ ಪೂಜಿಸುವ ಹಬ್ಬ
ಇದ್ ಚೆಂದದ ದಸರಾ ಹಬ್ಬ!

ಊರ್ ಊರಿಗೇ ತಳಿರ್ ತೋರಣ!
ಬೀದಿ ಬೀದಿಗೂ ರಂಗೋಲಿ
ಅಲಂಕರಣ

ಹೊಸ ಹೊಸ ಬಟ್ಟೆಲಿ
ದೇವರ ದರ್ಶನ!
ಬಂಧುಬಳಗ ಸೇರಿ
ಗೋಷ್ಠಿಗಳ ವೀಕ್ಷಣ!

ದಿನದಿನ ಹೊಸ ಹೊಸಕಾರ್ಯಕ್ರಮಗ
ಸಂಗೀತ ನಾಟಕ
ಕಲಾಪ್ರದರ್ಶನಗ

ವಸ್ತುಪ್ರದರ್ಶನಗಳ್‌ಲಿ
ಜಾದೂ ದರ್ಶನ

ತೂಗುವ ಸಾಗುವ
ಏರುವ ಇಳಿಯುವ
ಮನರಂಜನೆಗಳ
ನಾನಾ ಸಾಧನ!

ಅರಮನೆಯಂತೂ
ಝಗಮಗ ಝಗಮಗ
ತಿಂಡಿ ಅಂಗಡಿಗಳ್‌ಲಿ
ಹೊಮ್ಮುವ ಘಮಘಮ!

ಚಾಮುಂಡಿ ಬೆಟ್ಟಲಿ
ಅಮ್ಮ ಪೂಜೆನ ಸಂಭ್ರಮ
ಮೃಗಾಲಯಲಿ ತರತರ
ಪ್ರಾಣಿಪಕ್ಷಿಗಳ ದರ್ಶನ!

ಅಲ್ಲಲ್ಲಿ ನಡೆಯುವ
ಕುಶಲಕಲಾ ಪ್ರದರ್ಶನ
ಇತಿಹಾಸ ಪ್ರಸಿದ್ಧ
ಜಟ್ಟಿಕಾಳಗ ದರ್ಶನ!

ಕಲಾಮಂದಿರಲಿ ಬಿಡುವಿಲ್ಲದ
ನೃತ್ಯನಾಟಕ ವೀಕ್ಷಣ
ಪ್ರತಿದಿನ ಸಾಗುವ
ಸಾಂಸ್ಕೃತಿಕ ಕಾರ್ಯಕ್ರಮ!

ಅರಮನೆ ನೋಡಿಕೆ
ಬಂದಿವೆ ಜನ ಲಕ್ಷಲಕ್ಷ,
ಎಲ್ಲದರ ನೋಟವೂ
ತಂದದೆ ಹರ್ಷವರ್ಷ!

ನೋಡಿಕೆ ಸಾವಿರ ಕಣ್ಣೂ ಸಾಲದ್
ಕೇಳಿಕೆ ನೂರು ಕಿವಿಗ ಸಾಲದ್
ನಡಿಯಕೆ ಎರಡೇ ಕಾಲ್ ಸಾಲದ್
ರುಚಿ ನೋಡಿಕೆ ಒಂದೇ ನಾಲಗೆ ಸಾಲದ್!

ಅರಮನೆಲಿ ರಾಜನ ದರ್ಬಾರ್
ರತ್ನಸಿಂಹಾಸನಲಿ ವೈಭವ ಜೋರು!
ಹತ್ತನೆ ದಿನದ ಜಂಬೂ ಸವಾರಿ
ಎಂದೂ ಮರೆಯದ
ಸಂಭ್ರಮದ ಸಿರಿ!

ಕನ್ನಂಬಾಡಿನ ಮರಿಯೊದು ಉಟ್ಟ?
ಮರ್ತರೆ ಕಾವೇರಿಗೆ ಬೆಲೆ ಉಟ್ಟ?
ಹಸ್ರು ಉಸ್ರ್‌ನ ಜೀವವಾಹಿನಿನ
ಬಣ್ಣ ಬಣ್ಣದ ಕಾರಂಜಿ ಕುಣ್ತನ

ನೋಡಿ ಬರೊಕು ಒಮ್ಮೆ
ಹೋಕ್ಕೊಂತಾದ್ದೆ ಮತ್ತೊಮ್ಮೆ!

ಇದು ಕನ್ನಡಿಗರ ನಾಡಹಬ್ಬ
ಮನೆ ಮನೆನ ನಲಿಸುವ ಹಬ್ಬ
ನವದುರ್ಗೆಯರ ಸ್ತುತಿಸುವ ಹಬ್ಬ!
ವಿಜಯನಗರದ ಅರಸರ್
ಶುರುಮಾಡಿ ಕೊಟ್ಟ
ಮೈಸೂರ್ನ ರಾಜರ ಪರಂಪರೆನ ಹಬ್ಬ!

ಬಾತ್ ಬಾತ್ ದಸರೆನ ಹಬ್ಬ
ತಾತ್ ತಾತ್ ಮಸ್ತ್ ಖುಷಿನ ಹಬ್ಬ
ಇದ್ ನಾಡ ಜನಗ ನಲಿಯುವ ಹಬ್ಬ
ನಮ್ಮ ಸಂಸ್ಕೃತಿನ ಹೆಮ್ಮೆಯ ಹಬ್ಬ!

## ಅರಳಿದ ಮನ್ಸ್

ಕಾರ್ಮೋಡ ಕವಿದುಟ್ಟು ಆಕಾಶಲಿ
ನವಿಲೊಂದು ಕುಣಿತುಟ್ಟು ಭಾರೀ ಖುಸಿಲಿ..

ಹಕ್ಕಿಗ ಹಾರ್ತೊಳೊ ಅವಸರವಸರಲಿ
ದೇವ್ರೇ, ಈಗಾದರು ಒಂದೊಳ್ಳೆ ಮಳೆ ಸುರಿಯಲಿ

ಯಾಗೊಳು ಸರಿಯಾಗಿ ಮಳೆ ಆಗುವ ಜಿಲ್ಲೆ
ಇಂದ್ ಮಳೆಗಾಲತ್ಹೇಳ್ದೇ ಗೊತ್ತಾಗ್ತಾ ಇಲ್ಲೆ

ಮರಗಿಡ ನೆಟ್ಟ್ ಬೆಳೆಸೊನ ನಾವು
ಇಲ್ಲರೆ ತಡೆಕಾಕಿಲೆ ಬಿಸಿಲ್ನ ಕಾವು..

ಮರಗಿಡ ಇದ್ದರೆ ಮಳೆ ಬಾದು
ಇಲ್ಲರೆ ಭೂಮಿ ಬರಡಾದು
ಕುಡಿಯಕೆ ನೀರೇ ಇಲ್ಲದಾದು..!

**ಪ್ರೀತಮ್ ಅಡ್ಕಾರ್**
ಅಡ್ಕಾರು ಮನೆ, ಜಾಲ್ಸೂರು ಅಂಚೆ,
ಸುಳ್ಯ ತಾಲೂಕು, ದ.ಕ. –574239
ದೂರವಾಣಿ: 9740542944

## ಸುರೂಗೆ ನೆನ್ದನೆ

ಸುರೂಗೆ ನೆನ್ದನೆ
ನೆಲತಾಯಿನ ನಾ
ಬದ್ಕಿಕೆ ಆಶ್ರಯ ಕೊಟ್ಟವಳ ।
ತಿಂಬಕೆ ತುತ್ತುನ ಕೊಡುವವಳ ॥

ಸಮುದ್ರ ಸಾಗರ ಒಡ್ಲ್‌ಲಿ ಹೊತ್ತ್
ಕೋಟಿ ಜೀವಿಗಳ ಪೊರೆವವಳ
ಗಿರಿ ಕಾನನಗಳ ಕಣಿವೆ ಬಯಲ್‌ಗಳ ।
ನಾನಾ ರೂಪಲಿ ಮೆರೆವವಳ ॥

ನೆನ್ದೆನೆ ಸೂರ್ಯನ
ಬೀಸುವ ಗಾಳಿನ
ಹರಿವ ನದಿಕೆರೆ ಎಲ್ಲವನು ।
ಲೋಕದ ಶಕ್ತಿಯ ಮೂಲವನು ॥

ಗಿರಿ ಗಿರಿ ಬುಗುರಿ ತಿರ್ಗುವ ತಂತ್ರ
ಕತ್ತಲೆ ಬೆಳ್ಕ್‌ನ ಆಟ
ಅಹಾ! ಕತ್ತಲೆ ಬೆಳ್ಕ್‌ನ ಆಟ!
ಮಳೆ ಚಳಿ ಬೇಸಗೆ ಎಲ್ಲಾ ಉಟ್ಟು
ಸೂರ್ಯನ ಸುತ್ತುವ ಸೂತ್ರ ॥
ಅದ್ ಸೂರ್ಯನ ಸುತ್ತುವ ಸೂತ್ರ ॥

ನೀಲಾ ಆಕಾಶಲಿ ಮಿಣಿ ಮಿಣಿ ದೀಪ
ಎಂತಾ ಪೊರ್ಲುನ ನೋಟ
ನೋಡಿಕೆ ಎಂತಾ ಪೊರ್ಲುನ ನೋಟ ॥
ವಿಸ್ಮಯ ವಿಶ್ವದ ಕೂಸುಗ ನಾವ್
ಅವ್ವಂಗೆ ಸಾವ್ರ ನಮನ ।
ನಮ್ಮವ್ವಂಗೆ ಸಾವ್ರ ನಮನ ॥

**ಕುಯಿಂತೋಡು ದಾಮೋದರ** ಸಂಪಾಜೆ, ಚೆಂಬು ಗ್ರಾಮ




# ಕೂಳಿ

ಬರಹ : **ಎಂ.ಜಿ. ಕಜೆ.**
ಚಿತ್ರ : **ಶಶಿ ಪೋಟೋಜೆನಿಕ್ಸ್ ಸುಳ್ಯ**
ವಸ್ತು ಸಂಗ್ರಹ : **ಸುಬ್ರಹ್ಮಣ್ಯ ಗೌಡ ಕುಂತೂರು**

ಇದ್ ಕೂಳಿ. ಮೀನ್ ಹಿಡೆವ ಒಂದು ಸೊತ್ತು. ನಮ್ಮ ಹಿಂದೆನವು ಬಾರೀ ಚಾತುರ್ಯನವು ಮೀನ್ ಹಿಡೆಕೆ ಇಂತಾ ಕೂಳಿನ ಮಾಡಿಕಾಂತಿದ್ದೊ. ಮಳೆಗಾಲಲಿ ಮೀನ್ ಬೇಟೆ ಅವುಕೆ ಬಾರೀ ಕುಸಿನ ಸಂಗತಿ. ಆಗ ಹೆಚ್ಚ್‌ಕಮ್ಮಿ ಎಲ್ಲರ ಮನೆಲೂ ಕೂಳಿ ಇರ್ತಿತ್. ಹಿಂದೆನ ಕಾಲಲಿ ಹಳ್ಳಿಲಿ ಮಳೆಗಾಲ ಬಾತ್‌ಂತೇಳಿರೆ ಸಾಕ್ ಅಟ್ಟಲಿರುವ ಕೂಳಿನ ಹೊರಗೆತೆಗ್ದ್ ಮನಾರ ಮಾಡಿಕಾಂದವೆ. ಹಾಳಾಗಿದ್ದರೆ ಸರಿ ಮಾಡಿಕಂಡವೆ.

ಕೂಳಿನ ಚಾಳೆ ಮಡ್ಲ್‌ನ ಕಡ್ಡಿಲಿ, ಬೆದ್‌ರ್‌ನ ಕಡ್ಡಿಲಿ, ಬೈನೆ ಸೋಗೆ ಕಡ್ಡಿಲಿ ಮಾಡುವೆ. ಅದ್ ಅಲ್ಲದೆ ಕಾಡ್‌ಲಿ ಇರುವ 'ಚಿಕ' ದೆಯ್ಯಿನ – ಪಾಮ್‌ಎಣ್ಣೆ ಮರದ ಹಾಂಗೇ ಇರುವ ಒಂದು ಜಾತಿ ಮರದ ಸೋಗೆ ಕಡ್ಡಿಂದಲೂ ಮಾಡುವೆ. ಕಡ್ಡಿನ ಪೊರ್ಲು ಕೀಸೊಕು. ಕೂಳಿಗೆ ಆಕಾರ ಬರೊಕುಂತಾದರೆ ಒಸಿ ದಪ್ಪದ ಮಾದ್ರಿ ಬೊಳ್ಳಿ ಅಲ್ಲರ್ ಬೆತ್ತಲಿ ಚಕ್ರದ ಹಾಂಗೆ ಮಾಡಿಕಂಡ್‌ಅದ್ಕೆ ಸುತ್ತಲೂ ಕಡ್ಡಿಗಳ ಬೆತ್ತದ ಬೊಳ್ಳಿಲಿ (ಗಟ್ಟಿ ಇರುವ ಬೇರೆ ಬೊಳ್ಳಿನೂ ಆದೆ.) ಹಕ್ಕಲೆ ಹಕ್ಕಲೆ ನೇಯೊಕು. ಒಂದು ಕಡೆ ದೊಡ್ಡ ಬಾಯಿ ಕಂಡದೆ. ಇನ್ನೊಂದು ಕಡೆ ಗಾತ್ರ ಸಣ್ಣದಾಗ್ತಾ ಹೋದೆ. ಹಾಂಗೆ ಆಕರ್ ಅಲ್ಲಿಗೆ ಸಣ್ಣ ಚಕ್ರಗಳ ಇಸಿಕಾಂಕು, ಕೂಳಿನ ಆಕಾರ ಬಂದ



ಮೇಲೆ ಸಪೂರದ ಕಡೆಲಿ ಎಲ್ಲಾ ಕಡ್ಡಿಗಳ ಜೋಡಿಸಿ ಕಟ್ಟೊಕು.

ಮತ್ತೆ ಸಣ್ಣ ಕಡ್ಡಿಗಳ ಹಕ್ಕಲೆ ಹಕ್ಕಲೆ, ಅಂದಾಜ್ ಅರ್ದ ಮಾರ್‌ನಷ್ಟ್ ನೇಯೊಕು. ಅದರ ಒಂದು ಪುಡೆಲಿ ನೇಯದೇ ಹಾಂಗೇ ಬುಡೊಕು. ನೇಯ್ದ ಮೇಲೆ ಹಾಂಗೇ ಬುಟ್ಟ ಪುಡೆನ ದೊಡ್ಡ ಬಾಯಿ ಇರುವಲ್ಲಿ ಒಳಗೆ ಹೋಗುವಾಂಗೆ ಮಾಡೊಕು. ಇನ್ನೊಂದು ಪುಡೆ ದೊಡ್ಡ ಬಾಯಿಲಿ ಇರುವ ಚಕ್ರಕ್ಕೆ ಜೋಡಿಸಿ (ಚಿತ್ರಲಿ ಕಾಂಬ ಹಾಂಗೇ) ಕಟ್ಟ್‌ತಾ ಹೋಕು. ಅದರ್ಲಿ ಉಳ್ದ ಭಾಗನ ಮೇಲೆ ಕಿರೀಟದ ಹಾಂಗೇ ಕಾಂಬ ರೀತಿ ಕಟ್ಟೊಕು. ಇದ್ಕೆ 'ಕಂಜಿ' ಅಂತ ಹೇಳುವೆ. ಇದರ್ಲಿ ಮೀನ್‌ಗಳಿಗೆ ಒಳಗೆ ಹೋಕೆ ಆಕು. ಹೊರಗೆ ಬಾಕೆ ಆಗದ ಹಾಂಗೆ ಇರೊಕು. ಅದರ ಎಡೆಗೆ ಕಾಯಿ ಚೊಪ್ಪು ಇಸಿ ಸೆರೆ ಇಲ್ಲದ ಹಾಂಗೆ ಕಟ್ಟುವೆ. ಚಾಳೆಕಡ್ಡಿ, ಬೈನೆ ಕಡ್ಡಿಲಿ ಮಾಡ್ದ ಕೂಳಿ ಹೆಚ್ಚ್ ದೊಡ್ಡದಿರುದುಲೆ. ಬೆದ್‌ರ್ ಕಡ್ಡಿಲಿ ಮಾಡ್ದ ಕೂಳಿ ಉದ್ದ ಇದ್ದದೆ. ಕೂಳಿನ ಮೇಲ್ಪುಡೆಗೆ ಹಿಡ್ಕಂಕೆ ಆವಾಂಗೇ ಕೈ ಇದ್ದದೆ. ಇದರ ಒಳಗೆ ಹೋದ ಮೀನಿಗೆ ಹೊರಗೆ ಹೋಕೆ ಆದುಲೆ .

ಮಳ್ಗಾಲ ಮಳೆ ಬಾಕನ ಹಳ್ಳಲಿ ನೀರ್ ಜಾಸ್ತಿ ಆಕನ ಮೀನ್‌ಗ ನೀರ್ ಬಾವ ಕಡೆಗೆ ಹತ್ತಿಕಂಡ್ ಹೋದವೆ. ಇದ್ಕೆ ಉಬರ್ ಹತ್ತುದುಂತ ಹೇಳುವೆ. ತೇಳ್ರೆ ಒರ್ತೆನೀರ್ ಹರ್ದ್ ಬಾವ ಕಡೆಗೆ ಮೊಟ್ಟೆ ಇಸಿ ಮರಿ ಮಾಡಿಕೆಂತ ಮೀನ್‌ಗ ಹೋದವೆ. ಆಗ ಹಳ್ಳಕ್ಕೆ ಅಲ್ಲರ್ ಕಣಿಗೆ ಅಡ್ಡಕ್ಕೆ ಮರ, ಕೊಮ್ಮೆನ ಅಲ್ಲರ್ ಬೆದ್‌ರ್‌ನ ತುಂಡುಗಳ ಗೂಟ ಹಾಕಿ ಕಟ್ಟಿ ಅದರ ಎಡೆಲಿ ಕೂಳಿನ ದೊಡ್ಡ ಬಾಯಿ ನೀರ್ ಹರ್ಕಂಡ್ ಹೋವ ಕಡೆಗೆ ಜಾಗ್ರತೆಲಿ ಕಟ್ಟಿ ಇಸುವೆ. ಕೂಳಿ ನೀರ್‌ಲಿ ಕೊಚ್ಚಿ ಹೋಗದ ಹಾಂಗೆ ಕೂಳಿನ ಮೇಲೆ ಭಾರದಕಲ್ಲ್ ಇಸುವೆ. ಮೀನ್‌ಗ ಮೇಲೆ ಮೇಲೆ ಹತ್ತಿಕಂಡ್ ಬಂದ್ ಕೂಳಿ ಒಳಗೆ ಹೋದವೆ. ಒಳಗೆ ಹೋದ ಮೀನ್‌ಗಳಿಗೆ ಹೊರೆಗೆ ಹೋಕೆ ಆದುಲೆ.

ನಾವು ಸಣ್ಣೆತಿರಿಕನ ಊರುನವು ಎಲ್ಲ ಸೇರಿ ಹಳ್ಳಕ್ಕೆ ಕಟ್ಟ ಹಾಕಿ ಕೂಳಿ ಇಸುತಿದ್ದೊ. ಮಳೆ ಬಂದರೆ ಸಾಕ್ ಎಲ್ಲವೂ ಹಳ್ಳದ ಕಡೆಗೆ ಹೋತಿದ್ದೋ. ಮಳೆ ಬಂದರೆ ನೀರ್ ಕಳಂಕ್ ಆದೆ. ಆ ಕಳಂಕ್ ನೀರಿಗೆ ಮೀನ್‌ಗ ಉಬರ್ ಹತ್ತುವೆ. ಆಗ ದೊಡ್ಡವರೊಟ್ಟಿಗೆ ನಾವು ಮಕ್ಕಳೂ ಸಾ ಹೋತಿದ್ದೊ. ಎಷ್ಟೋ ಸರ್ತಿ ನಾವು ಹಿಂಬೊತ್ತು ಮಳೆ ಸುರಾಕನ ಹಳ್ಳಕ್ಕೆ ಹೋದರೆ ಹಳ್ಳದ ಕರೆಲೆಕುದ್ದ್‌ಕಂಡ್ ಉಮ್ಮಣಿ ಕಚ್ಚಿಸಿಕಂಡ್ ಇದ್ದದ್ ಉಟ್ಟು.ಜೋರು ಮಳೆ ಬಂದರೆ ಸೇರ್ ಸೇರ್ ಮೀನ್ ಸಿಕ್ಕಿದಾಂಗೇ.

ಮೂಡು, ನೊಳಿ, ಅರೆಂಜ, ಚೀಕೊಟೆ, ಹೆರ್ಗ್‌ಲ್, ಕೂರ್ಲು, ಕರಿಮೀನ್, ಕಾಜೋವ್, ಪಾಚೋಲ್ತಿ, ಕಲ್ಲ್‌ಮುಳ್ಳ, ಬಾಳೆಮೀನ್, ಹಾವು ಮೀನ್ ಹೀಂಗೆ ತರತರದ ಮೀನ್‌ಗ ಕೂಳಿ ಒಳಗೆ ಇದ್ದವೆ. ಒಮ್ಮೊಮ್ಮೆ ಎರಡ್ ಮೂರು ಸೇರ್‌ನಸ್ಟ್ ಮೀನ್ ಸಿಕ್ಕುದುಟ್ಟು. ಕೂಳಿನ ಮೇಲೆ ತಂದ್‌ಅದರ ಸಪೂರದ ಪುಡೆಲಿ ಇರುವ ಕಟ್ಟ ಬಿಚ್ಚಿಕೊಡ್ಕಿರೆ ಮೀನ್‌ಗ ಉದುರುವೆ.

ಅರ್ಕಿಲ್ ಗದ್ದೆ ನೀರ್ ಆರ್ಸುವ ಕ್ರಮ ಉಟ್ಟು, ಆಗ ಗದ್ದೆಲಿ ಇದ್ದ ಮೀನ್‌ಗ ನೀರ್ ಹೋದ ಕಡೆಗೇ ಹೋದವೆ. ಬಡ್ಚಿಲ್‌ಕಡ್ದ್ ನೀರ್ ಹೋಕೆ ಬುಟ್ಟ ಜಾಗೆಲಿ ಕೂಳಿ ಇಸುವೆ. ಸಣ್ಣ ಸಣ್ಣ ಮೀನ್‌ಗ ಇರುವ ಜಾಗೆಲಿ ಚಾಳೆ ಮಡ್ಲ್‌ನ ಕಡ್ಡಿಂದ ಮಾಡ್ದ ಕೂಳಿ ಒಳ್ಳೆದ್ ಅಂತ ಹೇಳುವೆ. ಮಳ್ಗಾಲ ಅಲ್ಲದೆ ಬೇರೆ ದಿನಗಲ್ಲಿ ಕೂಳಿ ಒಳಗೆ ಕೋಳಿ ಕರ್ಳ್ ಹಾಕಿ ದೊಡ್ಡ ದೊಡ್ಡ ಗುಂಡಿಲಿ ಕಲ್ಲ್ ಕಟ್ಟಿ ಇಸುವೆ ಮೀನ್‌ಗ ಕರ್ಳ್ ತಿಂಬಕೆ ಅದರ ಒಳಗೆ ಹೋಗಿ ಅಲ್ಲೇ ಬಾಕಿ ಆದವೆ. ಇಂತಾ ಕೂಳಿಗೆ ಎದ್‌ರ್‌ಗಡೆ ಕಿರೀಟ ಇರ್‌ದುಲೆ.

ಹಿಂದೇನ ಕಾಲದ ಜನಕ್ಕೆ ಬೇಜಾರ್ ಆಕನ ಕಾಡಿಗೆ ಮೃಗಗಳ ಬೇಟೆಗೆ ಹಳ್ಳ ಚೋಡಿಗೆ ಮೀನ್ ಬೇಟೆಗೆ ಹೋತಿದ್ದೊ. ಮಳೆಗಾಲ ಮೀನ್ ಹಿಡೆಕೆ ಕೂಳಿನ ಮಾಡ್‌ತಿದ್ದ ಹಾಂಗಾಗಿ ಕೂಳಿ ಪಿರಾಕ್‌ಲೇ ಜನ ಕಂಡ್ ಹಿಡ್ದ ಒಂದು ಸೊತ್ತು. ಕೂಳಿ ಮಾಡಿಕೆ ಎಲ್ಲವುಕು ಆಕಿಲೆ. ಹಾಂಗೆಂತ ಅದ್ ಕಷ್ಟದ ಕೆಲಸ ಏನಲ್ಲ. ಒಮ್ಮೆ ನೋಡಿರೆ ಯಾರಿಗೂ ಮಾಡಕ್. ಅದರೆ ಒಸಿ ಚಾತುರ್ಯ ಬೇಕು ಅಷ್ಟೆ.

ಮಳ್ಗಾಲ ಮಾತ್ರ ಅಲ್ಲದೇ ಅರ್ಕಿಲ್ ಸ ಇದ್ ಉಪಯೋಗಕ್ಕೆ ಬಂದದೆ. ಕೂಳಿಗೆ ಒಮ್ಮೊಮ್ಮೆ ಎಸ್‌ಂಡ್, ಹಾವು ಕೂಡ ಕೂಳಿಲಿ ಸಿಕ್ಕಿ ಬಿದ್ದದೆ ಹಾವು ಸಿಕ್ಕಿಬಿದ್ದರೆ  ಮೀನ್ ತಿಂದ್ ಕಾಲಿ ಮಾಡ್ದೆ .

ಈಗನವುಕೆ ಕೂಳಿಂತೇಳಿರೆ ಎಂತದ್‌ಂತ ಗೊತ್ತಾಕಿಲೆ. ಹಳ್ಳಲಿ ಮೀನ್‌ಗಳೇ ಕಡಿಮೆ ಆಗಿರಿಕನ ಕೂಳಿನ ಉಪಯೋಗನೇ ಇಲ್ಲೆ.

ಹಿಂದೆನವು ಹಳ್ಳಕ್ಕೆ ಕಡು ಹಾಕಿ ಮೀನ್ ಹಿಡಿಯೊತಿದ್ದೊ. ರಾತ್ರೆ ಸೂಟೆಕಟ್ಟಿ (ಸೂಟೆ ಮೀನ್) ಹಳ್ಳಲಿರುವ ಮೀನ್‌ಗಳ ಬಾಳ್ ಕತ್ತಿಲಿ ಕಡ್ದ್ ಹಿಡಿಯೊತಿದ್ದೊ. ಗಾಳ ಹಾಕಿಯೂ ಹಿಡಿಯೊತಿದ್ದೋ. ಆಗ ಅವುಕೆ ಅದೊಂದು ಮನರಂಜನೆಯೂ ಹೌದು. ಮೀನ್ ಸಿಕ್ಕಿರೆ ಹುಳ್ಳಂಗೆ ಉಂಬಕೆ ಆತಿತ್. ಈಗ ಅದೆಲ್ಲ ಬರೇ ನೆಂಪು ಅಷ್ಟೇ.

**ಎಂ.ಜಿ. ಕಜೆ.**

## 2022ರ ಜನವರಿಂದ ಮಾರ್ಚ್ ತಿಂಗ್ಳ ಅಕ್ರಿವರೆಗೆ ಅಕಾಡೆಮಿ ಹಮ್ಮಿಕಂಡಿದ್ದ ಕಾರ್ಯಕ್ರಮಗ

1. ಕರ್ನಾಟಕ ಅರೆಭಾಷೆ ಸಂಸ್ಕೃತಿಮತ್ತೆ ಸಾಹಿತ್ಯ ಅಕಾಡೆಮಿನ 2019–20 ಮತ್ತೆ 2020–21ರ ಸಾಲ್‌ನ ಗೌರವ ಪ್ರಶಸ್ತಿ ಪ್ರದಾನ ಕಾರ್ಯಕ್ರಮ ಜನವರಿ 3ರಂದ್ ಸುಳ್ಯದ ಜಾನಕಿ ವೆಂಕಟ್ರಮಣಗೌಡ ಸಭಾಭವನ ಅಮರಶ್ರೀಭಾಗ್‌ಲಿ ನಡ್ತ್. ಗೌರವ ಪ್ರಶಸ್ತಿ ಪ್ರದಾನ ಕಾರ್ಯಕ್ರಮದ ಅಧ್ಯಕ್ಷತೆನ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರಾದ ಲಕ್ಷ್ಮೀನಾರಾಯಣ ಕಜೆಗದ್ದೆವು ವಹಿಸಿದೊ. ಕರ್ನಾಟಕ ಸರಕಾರದ ಕನ್ನಡ ಮತ್ತೆ ಸಂಸ್ಕೃತಿ ಇಲಾಖೆನ ಸಚಿವ ಸುನೀಲ್‌ಕುಮಾರ್‌ವು 2019–20 ಮತ್ತೆ 2020–21ರ ಸಾಲ್‌ನ ಗೌರವ ಪ್ರಶಸ್ತಿನ ಪ್ರದಾನ ಮಾಡ್ದೊ. ಕರ್ನಾಟಕ ಸರ್ಕಾರದ ಬಂದರು ಮತ್ತೆ ಮೀನುಗಾರಿಕೆ ಇಲಾಖೆ ಸಚಿವರಾದ ಎಸ್. ಅಂಗಾರ, ಮಂಗಳೂರು ಲೋಕಸಭಾ ಕ್ಷೇತ್ರದ ಸದಸ್ಯ ನಳಿನ್ ಕುಮಾರ್ ಕಟೀಲ್, ಸುಳ್ಯ ನಗರ ಪಂಚಾಯತ್‌ನ ಅಧ್ಯಕ್ಷ ವಿನಯಕುಮಾರ್ ಕಂದಡ್ಕ ಮುಖ್ಯ ನೆಂಟ್ರಾಗಿ ಬಂದಿದೊ. ಮೈಸೂರ್‌ನ ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜ್, ಉಪನ್ಯಾಸಕ ಪಟ್ಟಡ ಶಿವಕುಮಾರ್‌ವು ಪ್ರಶಸ್ತಿ ಪುರಸ್ಕೃತರ ಬಗ್ಗೆ ಮಾತಡ್‌ದೊ. ಎನ್.ಎಸ್. ದೇವಿಪ್ರಸಾದ್‌ವು ಸಾಹಿತ್ಯ ಕ್ಷೇತ್ರ, ಶ್ರಿಮತಿ ಪಂಜಿಪಳ್ಳ ಇಂದ್ರಾಕ್ಷಿ ವೆಂಕಪ್ಪವು ಜಾನಪದ ಮತ್ತೆ ಚಿತ್ರಕಲಾ ಕ್ಷೇತ್ರಲಿ ದಿ.ಮೋಹನ್ ಸೋನಾರ ಪರವಾಗಿ ಅವರ ಹೆಣ್ಣ್ 2019–20ರ ಸಾಲ್‌ನ ಗೌರವ ಪ್ರಶಸ್ತಿನ ಪಡ್ಕೊಂಡೊಳೊ. 2020–21ರ ಸಾಲ್‌ನಗೌರವ ಪ್ರಶಸ್ತಿನ ಸಾಹಿತ್ಯ ಕ್ಷೇತ್ರಲಿ ಕುಂಞೇಟಿ ಶಿವರಾಮ ಗೌಡ, ಡಾ.ಕೋರನ ಸರಸ್ವತಿ ಪ್ರಕಾಶ್‌ವು ಸಂಶೋಧನ ಕ್ಷೇತ್ರ ಮತ್ತೆ ಪದ್ಮಯ್ಯ ಗೌಡ ಪರಿವಾರಕಾನವು ಪಾರಂಪಾರಿಕ ವೈದ್ಯಕ್ಷೇತ್ರಲಿ ಗೌರವ ಪ್ರಶಸ್ತಿನ ಪಡ್ಕೊಂಡೊಳೊ. ಶ್ರೀ ಕೆ.ಆರ್.ಗೋಪಾಲಕೃಷ್ಣ, ಶ್ರೀಮತಿ ರಮ್ಯ ದೀಲಿಪ್, ಮಯೂರ್ ಅಂಬೆಕಲ್ಲುವು ಕಾರ್ಯಕ್ರಮಲಿ ಅರೆಭಾಷೆ ಹಾಡ್‌ಗಳ್‌ನ ಹಾಡ್ದೊ. ಕಾರ್ಯಕ್ರಮಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ರಿಜಿಸ್ಟ್ರಾರ್ ಮತ್ತೆ ಎಲ್ಲಾ ಸದಸ್ಯರ್ ಉಪಸ್ಥಿತರಿದ್ದೊ.

2. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಮತ್ತೆ

ಕೈಕೇರಿ ಗೋಣಿಕೊಪ್ಪದ ಸಮೃದ್ಧಿ ಅರೆಭಾಷಿಕ ಗೌಡ ಬಾಂಧವರ ಸಮಿತಿ ಕೂಡುಕಟ್ಟ್‌ಲಿ ಫೆಬ್ರವರಿ 25ರ್‌ಂದ 27ರ ವರೆಗೆ ಅರೆಭಾಷೆ ಸಂಸ್ಕೃತಿ ಶಿಬಿರನ ಪಡಿಕ್ಕಲ್ ಐನ್‌ಮನೆಲಿ ಅಯೋಜಿಸಿದೊ. ಜಂಬರನ ನಿವೃತ್ತ ತೆರಿಗೆ ಅಧಿಕಾರಿ ಪಡಿಕ್ಕಲ್ ಚಂಗಪ್ಪವು ಉದ್ಘಾಟಿಸಿದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರಾದ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಭರದ ಅಧ್ಯಕ್ಷತೆನ ವಹಿಸಿದೊ, ಜಂಬರಕ್ಕೆ ನೆಂಟ್ರಾಗಿ ಕೈಕೇರಿ ಭಗವತಿ ದೇವಸ್ಥಾನದ ಆರ್ಚಕರ್ ಗುರುರಾಜ ರಾವ್ ಮತ್ತೆ ನಿವೃತ್ತ ಮುಖ್ಯ ಶಿಕ್ಷಕಿ ಶ್ರೀಮತಿ ತೆಕ್ಕಡೆ ಶಾಂತಿ ಲಕ್ಷ್ಮಣವು ಬಂದಿದೊ. ಆನೇರ ಲಾಲು ಮತ್ತೆ ಶ್ರೀಮತಿ ತೆಕ್ಕಡೆಕಡ್ಯದ ಪಾರ್ವತಿಯವು ಶಿಬಿರದ ಸಂಪನ್ಮೂಲ ವ್ಯಕ್ತಿಗಾಗಿಕೆಲ್ಸ ಮಾಡ್ದೊ. ಶಿಬಿರದ ಅಕೇರಿ ಜಂಭರ ಪಡಿಕಲ್ ಐನ್‌ಮನೆಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರಾದ ಲಕ್ಷ್ಮೀನಾರಾಯಣ ಕಜೆಗದ್ದೆಯವರ ಅಧ್ಯಕ್ಷತೆಲಿ ನಡ್ತ್. ಅಕೇರಿ ಜಂಬರದ ನೆಂಟ್ರಾಗಿ ಗೋಣಿಕೊಪ್ಪ ಗ್ರಾಮ ಪಂಚಾಯತ್ ಸದಸ್ಯರಾದ ಬಿ.ಎನ್.ಪ್ರಕಾಶ್ ಮತ್ತೆ ನಿವೃತ್ತ ಕಮಾಂಡೆಂಟ್ ಕರ್ತಿಕೊಲ್ಲಿ ಗಣೇಶ್ ಅವು ಬಂದಿದೊ. ಜಂಬರಲಿ ಅಕಾಡೆಮಿನ ಸದಸ್ಯರ್ ಉಪಸ್ಥಿತರಿದ್ದೊ.

3. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಮತ್ತೆ ಶ್ರೀ ಸುಬ್ರಹ್ಮಣ್ಯೇಶ್ವರಿ ಪದವಿ ಪೂರ್ವ ವಿದ್ಯಾಲಯ, ಸುಬ್ರಹ್ಮಣ್ಯ ಇದರ ಕೂಡುಕಟ್ಟ್‌ಲಿ ಮಾರ್ಚ್ 2ರಂದ್ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಂಘದ ಉದ್ಘಾಟನಾ ಜಂಬರ ಕಾಲೇಜಿನ ಬೆಳ್ಳಿಹಬ್ಬ ಸಭಾಂಗಣಲಿ ನಡ್ತ್.ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಂಘನ ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ ದೇವಸ್ಥಾನದ ವ್ಯವಸ್ಥಾಪನ ಸಮಿತಿಯ ಅಧ್ಯಕ್ಷರ್ ಮೋಹನ್‌ರಾಂ ಸುಳ್ಳಿಯವು ಉದ್ಘಾಟಿಸಿದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರಾದ ಲಕ್ಷ್ಮೀನಾರಯಣ ಕಜೆಗದ್ದೆವು ಉದ್ಘಾಟನಾ ಜಂಬರದ ಅಧ್ಯಕ್ಷತೆನ ವಹಿಸಿದೊ, ನೆಂಟ್ರಾಗಿ ಕೆ.ಎಸ್.ಎಸ್. ಕಾಲೇಜ್, ಸುಬ್ರಹ್ಮಣ್ಯ ಇದರ ಪ್ರಾಂಶುಪಾಲರ್ ಡಾ. ಗೋವಿಂದ ಎನ್.ಎಸ್. ಮತ್ತೆ ಎಸ್.ಎಸ್. ಪಿ.ಯು. ಕಾಲೇಜ್‌ನ ಪ್ರಾಂಶುಪಾಲರಾದ ಸೋಮಶೇಖರ ನಾಯಕ್ ಅವು ಬಂದಿದೊ. ಕಾರ್ಯಕ್ರಮಲಿ ಅಕಾಡೆಮಿನ ಸದಸ್ಯರ್ ಮತ್ತೆ ಕಾಲೇಜ್‌ನ ವಿದ್ಯಾರ್ಥಿಗ ಉಪಸ್ಥಿರಿದ್ದೊ.

4. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಮತ್ತೆ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಂವರ್ಧನಾ ಸಮಿತಿ, ಸುಳ್ಯ ಇದರ ವತಿಂದ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಂವರ್ಧನಾ ಸಮಿತಿ ಇದರ ಗ್ರಾಮ ಸಂಚಾಲಕರ ಮತ್ತೆ ಸಹಸಂಚಾಲಕರ ಸಭೆ ಮಾರ್ಚ್ 12ರಂದ್ ನಿಂತಿಕಲ್ಲು ಕೆ.ಎಸ್. ಗೌಡ ಕಾಲೇಜ್‌ಲಿ ನಡ್ತ್.

5. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ವತಿಂದ ಪ್ರಕಟ ಮಾಡ್ದ ಅರೆಭಾಷೆ ಪುಸ್ತಕಗಳ ಬಿಡುಗಡೆ ಜಂಬರ ಮಾರ್ಚ್ 20ರ ಐತ್ವಾರ ಚೆಟ್ಟಳ್ಳಿನ ಮೋದಿ ಭವನಲಿ ನಡ್ತ್. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರಾದ ಲಕ್ಷ್ಮೀನಾರಾಯಣ ಕಜೆಗದ್ದೆವು ಜಂಭರದ ಅಧ್ಯಕ್ಷತೆನ ವಹಿಸಿದೊ. ಮಂಗಳೂರು ವಿಶ್ವವಿದ್ಯಾನಿಲಯದ ಪರೀಕ್ಷಾಂಗ ಕುಲಸಚಿವ ಡಾ.ಪಿ.ಎಲ್.ಧರ್ಮ ಮತ್ತೆ ಹಿರಿಯ ವಿದ್ವಾಂಸ ಡಾ ಪ್ರಭಾಕರ ಶಿಶಿಲವು ಪುಸ್ತಕ ಬಿಡುಗಡೆ ಮಾಡಿ ಮಾತಾಡ್ದೊ. ಬಾರಿಯಂಡ ಜೋಯಪ್ಪ ಮತ್ತೆ ಲೀಲಾ ದಾಮೋದರ ಕೃತಿ ಪರಿಚಯನ ಮಾಡ್ದೊ. ಜಂಭರಲಿ ಕೊಡಗು ಗೌಡ ಸಮಾಜದ ಅಧ್ಯಕ್ಷರ್ ಪೇರಿಯನ ಜಯಾನಂದ, ಚೇರಳ ಗೌಡ ಸಂಘ, ಚೆಟ್ಟಳಿ ಇದರ ಅಧ್ಯಕ್ಷರ್ ಅಯ್ಯಂಡ್ರ ರಾಘವಯ್ಯ, ಗೌಡ ಸಂಘ ಕೂಡ್ಲೂರುನ ಅಧ್ಯಕ್ಷರ್ ಅಕ್ಕಾರಿ ದಯಾನಂದ ಮತ್ತೆ ಪಿ.ಎ.ಸಿ.ಎಸ್. ಚೆಟ್ಟಳಿನ ಅಧ್ಯಕ್ಷರ್ ಬಲ್ಲಾರಂಡ ಮಣಿ ಉತ್ತಪ್ಪವು ನೆಂಟ್ರಾಗಿ ಬಂದಿದೊ. ಜಂಭರಲಿ ಪ್ರೊ.ಕುಶಾಲಪ್ಪ ಗೌಡರ 'ಗಂಗಾವತರಣ ಭೀಷ್ಮೋದಯ' ಕುತ್ಯಾಳ ನಾಗಪ್ಪಗೌಡ (ಕಿರಣ) ರ 'ಯಾಕೀಕತೆ ಹಿಂಗಾತ್?', ಕಣಜಾಲ್ ಪೂವಯ್ಯರ 'ಮುತುಮಣಿ', ಕುಂಞೇಟಿ ಶಿವರಾಮ ಗೌಡರ 'ಬಲೀಂದ್ರನ ಸಂಧಿ', ಬಾರಿಯಂಡ ಜೋಯಪ್ಪರ 'ಚೆಂಚಿ', ತೆಕ್ಕಡೆಕುಮಾರ ಸ್ವಾಮಿ ಅವು ಬರ್ದ 'ಅರೆಭಾಷೆ ಗಾದೆಗ' ಮತ್ತೆ ಶ್ರೀಮತಿ ಕೊಟ್ಟಕೇರಿಯನ ಲೀಲಾ ದಯಾನಂದವು ಬರ್ದ 'ಅಟ್ಟಿ'ತೇಳುವ ಪುಸ್ತಕಗಳನ್ನ ಬಿಡುಗಡೆ ಮಾಡ್ದೊ.

## ಕರ್ನಾಟಕ ಅರೆಭಾಷೆ ಮತ್ತು ಸಾಹಿತ್ಯ ಅಕಾಡೆಮಿ

## ಅಧ್ಯಕ್ಷರು ಮತ್ತು ಸದಸ್ಯರ ವಿಳಾಸ

**ಅಧ್ಯಕ್ಷರು**
**ಶ್ರೀ ಲಕ್ಷ್ಮೀ ನಾರಾಯಣ ಕಜೆಗದ್ದೆ**
ಕನಕಮಜಲು ಅಂಚೆ,
ಸುಳ್ಯ ತಾಲೂಕು, ದ.ಕ 574223
ಮೊ.ನಂ 9449082249,
kajegadde@gmail.com

**ಸದಸ್ಯರು**
**ಶ್ರೀಮತಿ ಜಾನಕಿ ಬೈತಡ್ಕ**
#21–16. ರೇಸ್‌ಕೋರ್ಸ್ ರಸ್ತೆ,
ಎಲ್‌ಐಸಿ ಹತ್ತಿರ, ಮಡಿಕೇರಿ, ಕೊಡಗು.
ಮೊ ನಂ 9008571899

**ಶ್ರೀಮತಿ ಸ್ಮಿತಾ ಅಮೃತರಾಜ್**
'ಹಸಿರು'
ಬಾಲೆಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು
ಮೊ ನಂ 9980402968

**ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ**
ಟಿ.ಜಾನ್ ಲೇಔಟ್,
ಶಕ್ತಿ ಕ್ವಾಟ್ರಸ್
ಮಡಿಕೇರಿ
ಮೊ.ನಂ 9900992360

**ಶ್ರೀ ಎ.ಪಿ. ಧನಂಜಯ ಅಗೋಳಿಕಜೆ**
2ನೇ ಮೊಣ್ಣಂಗೇರಿ ಗ್ರಾಮ
ಮದೆ ಅಂಚೆ,
ಮಡಿಕೇರಿ ತಾಲೂಕು
ಮೊ ನಂ 9449731238

**ಶ್ರೀ ಆನಂದ ದಂಬೆಕೋಡಿ**
ಮೇಘಸಂದ್ಯೆ ಎಸ್ಟೇಟ್,
ಕತ್ತಲೆಕಾಡು ಗ್ರಾಮ,
ಕಡಗದಾಳು ಅಂಚೆ
ಮಡಿಕೇರಿ ತಾಲೂಕು
ಮೊ.ನಂ. : 9448141502

**ಡಾ. ದಯಾನಂದ ಕೂಡಕಂಡಿ**
ಬಿನ್. ಚಂದ್ರಹಾಸ ಕೆ.ಟಿ.
ತಾವೂರು ಗ್ರಾಮ, ಭಾಗಮಂಡಲ
ಮಡಿಕೇರಿ ತಾಲೂಕು
ಮೊ. ನಂ. : 9449766772
dayanandakudakandi@gmail.
com

**ಶ್ರೀ ಕುಸುಮಾಧರ ಎ.ಟಿ.**
ಬಿನ್. ತ್ಯಾಂಪಣ್ಣಗೌಡ
ಅಳಿಕೆ ಮಜಲು ಮನೆ
ಕಾಯರ್ತೋಡಿ, ಸುಳ್ಯ
ಮೊ. ನಂ. : 7090133686

**ಡಾ. ವಿಶ್ವನಾಥ ಬದಿಕಾನ**
ಬಿನ್. ಹೂವಪ್ಪಗೌಡ ಬದಿಕಾನ
ನಂ. 9–88/9,
ಪ್ಲಾಟ್ ನಂ.. 407(34)
ಧ್ರುವ ರೆಸಿಡೆನ್ಸಿ, ಎಕ್ಕೂರು,
ಕಂಕನಾಡಿ –575002,
ಮಂಗಳೂರು, ದಕ್ಷಿಣ ಕನ್ನಡ
ಮೊ. ನಂ. : 9449615474

**ಶ್ರೀ ಜಯಪ್ರಕಾಶ್ ಮೋಂಟಡ್ಕ**
ಕೌಸ್ತುಭ ನಿಲಯ, ಬಿಳಿನೆಲೆ ಗ್ರಾಮ
ನೆಟ್ಟಣ ಅಂಚೆ, ಕಡಬ ತಾಲೂಕು
ದಕ್ಷಿಣ ಕನ್ನಡ–574 230
ಮೊ. ನಂ. : 9480293464
7406141591

**ಶ್ರೀ ಪುರುಷೋತ್ತಮ ಕಿರ್ಲಾಯ**
ಬಿನ್. ದೇವಣ್ಣ ಗೌಡ ಕೆ.
ಕಿರ್ಲಾಯ ಮನೆ
ಅರಂತೋಡು ಗ್ರಾಮ ಮತ್ತು ಅಂಚೆ
ಸುಳ್ಯ ತಾಲೂಕು, ದಕ್ಷಿಣ ಕನ್ನಡ
ಮೊ. ನಂ. : 9449770439

**ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು**
'ಚಾಣಕ್ಯ'
ಸರಕಾರಿ ಪ್ರಥಮ ದರ್ಜೆ ಕಾಲೇಜು
ಮುಂಭಾಗ, ಗಾಂಧಿನಗರ,
ಕಾವೂರು,
ಮಂಗಳೂರು, ದ.ಕ–575015.
ಮೊಬೈಲ್ : 9448216070

**ಶ್ರೀ ಭರತೇಶ ಅಲಸಂಡೆಮಜಲು**
ಅಲಸಂಡೆಮಜಲು ಮನೆ
ಕೊಳ್ತಿಗೆ ಗ್ರಾಮ,
ಪುತ್ತೂರು ತಾಲೂಕು
ದಕ್ಷಿಣ ಕನ್ನಡ–574 212,
ಮೊ. ನಂ. : 9008027271

**ಶ್ರೀ ಕಿರಣ್ ಕುಂಬಳಚೇರಿ**
ಬಿನ್. ಕೇಶವ ಕೆ.ಎ. ಕುಂಬಳಚೇರಿ
ಮನೆಪೆರಾಜೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ
ಮೊ. ನಂ. : 9164069225

ರಿಜಿಸ್ಟ್ರಾರ್
**ಶ್ರೀ ಚಿನ್ನಸ್ವಾಮಿ**
ಸಹಾಯಕ ನಿರ್ದೇಶಕರು
ವಾರ್ತಾ ಇಲಾಖೆ
ವಾರ್ತಾ ಭವನ, ಕೊಡಗು ಜಿಲ್ಲೆ
ಮಡಿಕೇರಿ
ಮೊ: 9945045327

ಅರ್ಥ ಸದಸ್ಯರು
**ಶ್ರೀಮತಿ ಕೆ.ಟಿ. ದರ್ಶನ**
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ, ಮಡಿಕೇರಿ
ಮೊ: 9483110593

# ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ ಚೆಂಬು
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವ ಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ
18 ಬದುಕು : ಎಂ.ಜಿ. ಕಾವೇರಮ್ಮ
19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20 ಕಾಡ್‌ನ ಮಕ್ಕ : ಕೆ.ಆರ್. ತೇಜಕುಮಾರ್
21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ
22 ನೆಗೆ ಬೇಕ್ ಕೇದಗೆ ಗೊನೆ ಹಾಂಗೆ : ಡಾ॥ ಕರುಣಾಕರ ನಿಡಂಜಿ
23 ತಬ್ಲಿ ಮಂಜ : ಪಿ.ಜಿ. ಅಂಬೆಕಲ್
24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು
25 ಅರೆಬಾಸೆ ವ್ಯಾಕರಣ : ಪ್ರೊ. ಕೆ. ಕುಶಾಲಪ್ಪ ಗೌಡ
26 ಅಪೂರ್ವ ಸಂಗಮ : ಕಟ್ರತನ ಲಲಿತಾ ಅಯ್ಯಣ್ಣ
27 ಪುಂಸ್ತ್ರೀ (ಅರೆಭಾಷೆಗೆ ತರ್ಜುಮೆ) : ಎಂ.ಜಿ. ಕಾವೇರಮ್ಮ
28 ಕಲ್ಯಾಣಸ್ವಾಮಿ (ಅರೆಭಾಷೆಗೆ ತರ್ಜುಮೆ) : ಸಂಗೀತ ರವಿರಾಜ್
29 ಸಾಹೇಬ್ರು ಬಂದವೆ – ಅರೆಬಾಸೆ ರಂಗಪಯಣ
30 ಗಂಗಾವತರಣ – ಭೀಷ್ಮೋದಯ : ಪ್ರೊ. ಕೆ. ಕುಶಾಲಪ್ಪ ಗೌಡ
31 ಮುತ್ತುಮಣಿ – ಕಣಜಾಲ್ ಪೂವಯ್ಯ
32 ಬಲೀಂದ್ರನ ಸಂಧಿ (ಅರೆಭಾಷೆಗೆ ತರ್ಜುಮೆ) : ಕುಂಇೇಟಿ ಶಿವರಾಮ ಗೌಡ
33 ಯಾಕೀ ಕತೆ ಹೀಂಗಾತ್? : ಕುತ್ಯಾಳ ನಾಗಪ್ಪ ಗೌಡ (ಕಿರಣ)




ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಂಘದ ಉದ್ಘಾಟನಾ ಜಂಬರಲಿ ನೆಂಟ್ರಗಳ ಮಾತ್



ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಂವರ್ಧನಾ ಸಮಿತಿನ ಸಂಚಾಲಕರ ಮತ್ತೆ ಸಹಸಂಚಾಲಕರ ಸಭೆ



ಅರೆಭಾಷೆ ಪುಸ್ತಕ ಬಿಡುಗಡೆ ಜಂಬರ




ಅರೆಭಾಷೆ ಪುಸ್ತಕ ಬಿಡುಗಡೆ ಜಂಬರಲಿ ಪುಸ್ತಕ ಬಿಡುಗಡೆ ಮಾಡ್ದ ಡಾ. ಧರ್ಮ.ಪಿ.ಎಲ್.ವು ಮಾತನಾಡ್ದು



ಅರೆಭಾಷೆ ಪುಸ್ತಕ ಬಿಡುಗಡೆ ಜಂಬರಲಿ ವೇದಿಕೆಲಿ ಲೇಖಕರ್ ಮತ್ತೆ ನೆಂಟ್ರಗ

HINGARA AREBHASHE QUARTERLY VOLUME-4, ISSUE-9
DATE : 31-03-2022 KODAGU KARARB/2016/69571 PRICE : RS. 20/- PAGES : 80




ವೇದಿಕೆಲಿ ಗೌರವ ಪ್ರಶಸ್ತಿ ಪುರಸ್ಕೃತರೊಟ್ಟಿಗೆ




ಕನ್ನಡ ಮತ್ತೆ ಸಂಸ್ಕೃತಿ ಇಲಾಖೆ ಸಚಿವರಾದ ಸುನೀಲ್‌ಕುಮಾರವು ಪ್ರಶಸ್ತಿ ಪ್ರದಾನ ಜಂಬರಲಿ ಮಾತಾಡ್ದು




ಮಂಗಳೂರು ಲೋಕಸಭಾಕ್ಷೇತ್ರದ ಸದಸ್ಯರಾದ ನಳಿನ್ ಕುಮಾರ್ ಕಟೀಲ್‌ವು ಪ್ರಶಸ್ತಿ ಪ್ರದಾನ ಜಂಬರಲಿ ಮಾತಾಡ್ದು

Printed by **Chinnaswamy** on behalf of Registrar, **Karnataka Arebhase Samskruthi Mathu Sahitya Academy** and Published by **Chinnaswamy** on behalf of **Karnataka Arebhase Samskruthi Mathu Sahitya Academy** (name of owner) and Printed at **Aakrithi Prints,** Light House Hill Road, Mangaluru and Published at **Karnataka Arebhase Samskruthi Mathu Sahitya Academy,** Coffee Krupa Building, Ist Floor, Raja Seat Road, Madikeri, Kodagu District. Editor : **Dr. Dayananda Kudakandi**